KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೧೫, ೨೦೧೦ (ಚೈತ್ರ ೨೫, ಶಕ ವರ್ಷ ೧೯೩೨) | ಸಂಚಿಕೆ ೧೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು, ಅರಳಗುಂಡಿಕೆ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಸೈಟ್–2 ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009, ದಿನಾಂಕ 05–02–2009

**2.** ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜೆಪಿ/ಎಇ–5/200–10/6888, ದಿನಾಂಕ 20–11–2009

**3.** ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/134, ದಿನಾಂಕ 13–01–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್.–14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 120.00 ಲಕ್ಷ ರೂ.ಗಳ ಅಂದಾಜಿನ ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು, ಅರಳಗುಂಡಿಕೆ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಸೈಟ್–2 ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿದ್ದ ಕಾರಣ ಮುಂದೂಡಿ ಅಂತಿಮವಾಗಿ ದಿನಾಂಕ 16–05–09ರಂದು ವಿಸ್ತರಿಸಿ ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಕರ್ನಾಟಕ ರಾಜ್ಯ ಪತ್ರ | ದಿನಾಂಕ 21–05–09 |
| 2. | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 23–05–09 |
| 3. | ಪ್ರಜಾವಾಣಿ ದಿನಪತ್ರಿಕೆ | ದಿನಾಂಕ 24–05–09 |
| 4. | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 25–05–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 10 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು 3 ಜನ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು

ದಿನಾಂಕ 02-09-09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಮಾತ್ರ ಅರ್ಹವಾಗಿದ್ದು, ಆರ್ಥಿಕ ಬಿಡ್‌ಗಳನ್ನು ದಿನಾಂಕ 26-09-09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ :

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,17,60,070/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 1,15,26,098/- |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಹುಲಿಕಂತರಾಯ<br>1ನೇ ದರ್ಜೆ ಗುತ್ತಿಗೆದಾರರು | ರೂ. 1,47,56,975/- | 25.48 ಹೆಚ್ಚು | 28.03 ಹೆಚ್ಚು |
| 2 | ಎಸ್.ಎಸ್. ದೇಸಾಯಿ<br>1ನೇ ದರ್ಜೆ ಗುತ್ತಿಗೆದಾರರು | ರೂ. 1,52,02,767/- | 29.27 ಹೆಚ್ಚು | 31.89 ಹೆಚ್ಚು |

ಮೇಲ್ಕಂಡ ಕ್ರಮ ಸಂಖ್ಯೆ (1)ರಲ್ಲಿರುವ ಶ್ರೀ ಹುಲಿಕಂತರಾಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 28.03ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 02-01-2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,15,26,098-00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,31,97,382-00ಗಳಿಗೆ ಕಾಮಗಾರಿಯನ್ನು ಶ್ರೀ ಹುಲಿಕಂತರಾಯ 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮುಂದಿನ ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 95 ಅಪಿಬಿಂ 2009, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಜೇವರ್ಗಿ ತಾಲ್ಲೂಕು, ಅರಳಗುಂಡಿಕೆ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಸೈಟ್-2 ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,15,26,098ಗಳ ಮೇಲೆ ಶೇಕಡ 14,50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,31,97,382-00ಗಳಿಗೆ (ಒಂದು ಕೋಟಿ ಮೂವತ್ತೊಂದು ಲಕ್ಷದ ತೊಂಭತ್ತೇಳು ಸಾವಿರದ ಮುನ್ನೂರ ಎಂಭತ್ತೆರಡು ರೂ.ಗಳು ಮಾತ್ರ) ಶ್ರೀ ಹುಲಿಕಂಠರಾಯ, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 458

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು, ಕಡಕೋಳ ಗ್ರಾಮದ ಕಡಕೋಳ ನಾಲಾಕ್ಕೆ ಬಾಂದಾರ ನಿರ್ಮಾಣ (ಬಾಕಿ ಕೆಲಸ) ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 42 ಅಪಿಬಂ 2005, ದಿನಾಂಕ 31–03–2004
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–5/2009–10/7512. ದಿನಾಂಕ 16–12–2009
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/134, ದಿನಾಂಕ 13–01–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕು, ಕಡಕೋಳ ಗ್ರಾಮದ ಕಡಕೋಳ ನಾಲಾಕ್ಕೆ ಬಾಂದಾರ ನಿರ್ಮಾಣ(ಬಾಕಿ ಕೆಲಸ) ಮಾಡುವ ಕಾಮಗಾರಿಯ 153.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 31–03–2004ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿದ್ದ ಕಾರಣ ಮುಂದೂಡಿ ಅಂತಿಮವಾಗಿ ದಿನಾಂಕ 16–05–2009ರಂದು ವಿಸ್ತರಿಸಿ ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಕರ್ನಾಟಕ ರಾಜ್ಯ ಪತ್ರ | ದಿನಾಂಕ 21–05–09 |
| 2. | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 23–05–09 |
| 3. | ವಿಜಯ ಕರ್ನಾಟಕ ದಿನಪತ್ರಿಕೆ | ದಿನಾಂಕ 24–05–09 |
| 4. | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 01–06–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 02–09–2009ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಆರ್ಥಿಕ ಬಿಡ್‌ಗಳನ್ನು ದಿನಾಂಕ 26–09–2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ :

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,08,02,606/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,85,24,823/– |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ಎಸ್. ದೇಸಾಯಿ<br>1ನೇ ದರ್ಜೆ ಗುತ್ತಿಗೆದಾರರು | ರೂ. 2,32,15,875/– | 114.90 ಹೆಚ್ಚು | 25.32 ಹೆಚ್ಚು |
| 2 | ಹುಲಿಕಂಠರಾಯ<br>1ನೇ ದರ್ಜೆ ಗುತ್ತಿಗೆದಾರರು | ರೂ. 2,52,00,045/– | 133.27 ಹೆಚ್ಚು | 36.03 ಹೆಚ್ಚು |

ಮೇಲ್ಕಂಡ ಕ್ರಮ ಸಂಖ್ಯೆ (1)ರಲ್ಲಿರುವ ಶ್ರೀ ಎಸ್.ಎಸ್. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 25.32ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,85,24,823–00ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,12,10,922–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಎಸ್. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮುಂದಿನ ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 99 ಅಪಿಬಂ 2009, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಜೇವರ್ಗಿ ತಾಲ್ಲೂಕು, ಕಡಕೋಳ ಗ್ರಾಮದ ಕಡಕೋಳ ನಾಲಾಕ್ಕೆ ಬಾಂದಾರ ನಿರ್ಮಾಣ(ಬಾಕಿ ಕೆಲಸ)ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,85,24,823–00ಗಳ ಮೇಲೆ ಶೇಕಡ 14,50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,12,10,922–00ಗಳಿಗೆ (ಎರಡು ಕೋಟಿ ಹನ್ನೆರಡು ಲಕ್ಷದ ಹತ್ತು ಸಾವಿರದ ಒಂಭೈನೂರ ಇಪ್ಪತ್ತೆರಡು ರೂ.ಗಳ ಮಾತ್ರ) ಶ್ರೀ ಎಸ್.ಎಸ್. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 459

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕನಕಪುರ–ಮರಪಳ್ಳಿ ರಸ್ತೆಯ ಮೇಲೆ ಮುಲ್ಲಾಮಾರಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009, ದಿನಾಂಕ 05–02–2009

2. ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–5/200–10/6902, ದಿನಾಂಕ 20–11–2009

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/134, ದಿನಾಂಕ 13–01–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್.–14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 201.00 ಲಕ್ಷ ರೂ.ಗಳ ಅಂದಾಜಿನ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕನಕಪುರ–ಮರಪಳ್ಳಿ ರಸ್ತೆಯ ಮೇಲೆ ಮುಲ್ಲಾಮಾರಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಜಿಲ್ಲಾ ಟೆಂಡರ್ ಬುಲೆಟನ್ | ದಿನಾಂಕ 23–05–2008 |
| 2. | ಕರ್ನಾಟಕ ರಾಜ್ಯ ಪತ್ರ | ದಿನಾಂಕ 28–05–2008 |
| 3. | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 01–06–2009 |
| 4. | ಪ್ರಜಾವಾಣಿ ದಿನಪತ್ರಿಕೆ | ದಿನಾಂಕ 05–06–2009 |
| 5. | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿನಾಂಕ 06–06–2008 |

ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿದ್ದ ಕಾರಣ ಟೆಂಡರ್ ಪ್ರಕ್ರಿಯೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 23–07–2009ರಂದು ವಿಸ್ತರಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ 30–07–2009 ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ 06–08–2009ರಂದು ಪ್ರಕಟಿಸಲಾಗಿದೆ.

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 02–09–2009ರಂದು ತೆರೆಯಲಾಗಿ ಈ 3 ಜನ ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು. ಆರ್ಥಿಕ ಬಿಡ್‌ಗಳನ್ನು ದಿನಾಂಕ 26–09–09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ :

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,91,57,190/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,77,91,093/– |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ಡಿ. ಗೌಂಡಿ 1ನೇ ದರ್ಜೆ ಗುತ್ತಿಗೆದಾರರು | ರೂ. 2,31,29,718/– | 20.74 ಹೆಚ್ಚು | 30.01 ಹೆಚ್ಚು |
| 2 | ಎಸ್.ಸಿ. ತಿಳಗುಳ 1ನೇ ದರ್ಜೆ ಗುತ್ತಿಗೆದಾರರು | ರೂ. 2,39,61,145/– | 25.08 ಹೆಚ್ಚು | 34.68 ಹೆಚ್ಚು |
| 3 | ಬಿ.ಜಿ. ನಾಗೂರ 1ನೇ ದರ್ಜೆ ಗುತ್ತಿಗೆದಾರರು | ರೂ. 2,46,55,044/– | 25.70 ಹೆಚ್ಚು | 38.58 ಹೆಚ್ಚು |

ಮೇಲ್ಕಂಡ ಕ್ರಮ ಸಂಖ್ಯೆ (1)ರಲ್ಲಿರುವ ಶ್ರೀ ವಿ.ಡಿ. ಗೌಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.01ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,77,91,093–00ಗಳ ಮೇಲೆ ಶೇಕಡ 14.65ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,03,97,488–00ಗಳಿಗೆ ಕಾಮಗಾರಿಯನ್ನು ಶ್ರೀ ವಿ.ಡಿ. ಗೌಂಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮುಂದಿನ ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 97 ಅಪಿಬಂ 2009, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು, ಕನಕಪುರ–ಮರಪಳ್ಳಿ ರಸ್ತೆಯ ಮೇಲೆ ಮುಲ್ಲಾಮಾರಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,77,91,093–00ಗಳ ಮೇಲೆ ಶೇಕಡ 14,65ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,03,97,488–00ಗಳಿಗೆ (ಎರಡು ಕೋಟಿ ಮೂರು ಲಕ್ಷದ ತೊಂಭತ್ತೇಳು ಸಾವಿರದ ನಾನೂರ ಎಂಭತ್ತೆಂಟು ರೂ.ಗಳು ಮಾತ್ರ) ಶ್ರೀ ವಿ.ಡಿ. ಗೌಂಡಿ, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವದಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳ ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 460

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಮಾಗಿ ಚಿಕ್ಕಮಾಗಿ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 (6), ದಿನಾಂಕ 28–02–2009.
2. ಪತ್ರ ಸಂಖ್ಯೆ: ಮುಇಂ/ಸ(ಉ)ವ/ಬಿಜೆಪಿ/ಎಇ–6/2009–10/7470, ದಿನಾಂಕ 15–12–09.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/134, ದಿನಾಂಕ 13–01–10.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಮಾಗಿ ಚಿಕ್ಕಮಾಗಿ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಮಾಡುವ ಕಾಮಗಾರಿಯ 486.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 28–02–09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್ ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ: 16-09-09 |
| 2 | ಪ್ರಜಾವಾಣಿ ಕನ್ನಡ ದಿನಪತ್ರಿಕೆ ಹಾಗೂ ಟೈಮ್ಸ್ ಆಫ್ ಇಂಡಿಯಾ ಆಂಗ್ಲ ಪತ್ರಿಕೆ | ದಿ: 24-09-09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 25-09-09 |
| 4 | ಕರ್ನಾಟಕ ರಾಜ್ಯಪತ್ರ | ದಿ: 01-10-09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 15 ಜನ ಗುತ್ತಿಗೆದಾರರಲ್ಲಿ ನಿಗದಿತ ದಿನದಂದು 4 ಜನ ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು ದಿನಾಂಕ 24-11-09ರಂದು ತೆರೆಯಲಾಗಿ ಈ ಇಬ್ಬರೂ ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ನ್ನು ದಿನಾಂಕ 25-11-09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 4,70,56,023/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 4,77,36,009/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಮೆ॥ ಜಿ.ಕೆ.ಸಿ. ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರು | ರೂ. 6,40,36,783/- | 36.09 ಹೆಚ್ಚು | 34.15 ಹೆಚ್ಚು |
| 2 | ಎಸ್.ವಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 6,60,77,878/- | 40.42 ಹೆಚ್ಚು | 38.42 ಹೆಚ್ಚು |

ಕಡಿಮೆ ಮೊತ್ತ ಸೂಚಿಸಿರುವ ಮೇಲ್ಕಂಡ ಕ್ರ.ಸಂ. (1)ರಲ್ಲಿರುವ ಮೆ॥ ಜಿ.ಕೆ.ಸಿ. ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೋದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಸ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 34.15 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 02-01-10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 4,77,36,009-00 ಗಳ ಮೇಲೆ ಶೇಕಡ 14.65 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 5,47,29,334-00 ಗಳಿಗೆ ಕಾಮಗಾರಿಯನ್ನು ಮೆ॥ ಜಿ.ಕೆ.ಸಿ. ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 100 ಅಪಿಬಂ 2009, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಹಿರೇಮಾಗಿ ಚಿಕ್ಕಮಾಗಿ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯ ದರಗಳನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿ ಟೆಂಡರಿಗೆ ಇಡಲಾದ ಮೊತ್ತ ರೂ. 4,77,36,009–00 ಗಳ ಮೇಲೆ ಶೇಕಡ 14.65ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 5,47,29,334–00ಗಳಿಗೆ (ಐದು ಕೋಟಿ ನಲವತ್ತೇಳು ಲಕ್ಷದ ಇಪ್ಪತ್ತೊಂಭತ್ತು ಸಾವಿರದ ಮುನ್ನೂರ ಮೂವತ್ತಾಲ್ಕು ರೂ.ಗಳು ಮಾತ್ರ) ಮೆ॥ ಜಿ.ಕೆ.ಸಿ. ಪ್ರೈ. ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್ ಪಿ 2002, ದಿನಾಂಕ: 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.379

**(ವಿ. ಗೋವಿಂದರಾಜ್)**

ಸರ್ಕಾರದ ಉಪ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಗುಡ್ಡದ ತುಮ್ಮಿನಕಟ್ಟೆ ಗ್ರಾಮದ ಬಳಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ದಿನಾಂಕ 05–2–09ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009.
2. ಪತ್ರ ಸಂಖ್ಯೆ: ಮುಸದ / ತಾಂ–3 / ಸ.ಇಂ–8/ಶಿವಮೊಗ್ಗ / ಟೆಂಡರ್ / 2009–10/5002, ದಿನಾಂಕ 31–12–09.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 13/01/10ರ ಪತ್ರ ಸಂಖ್ಯೆ: ಮುಸದ / ಆಪ್ತ ಶಾಖೆ / ಟೆಂಡರ್ / 09–10/134.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್.–14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 171.00 ಲಕ್ಷ ರೂ.ಗಳ ಅಂದಾಜಿನ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಗುಡ್ಡದ ತುಮ್ಮಿನಕಟ್ಟೆ ಗ್ರಾಮದ ಬಳಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 31–01–2009 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿ: 07–02–2009 |
| 3 | ಕನ್ನಡಪ್ರಭ ದಿನಪತ್ರಿಕೆ | ದಿ: 08–02–2009 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ಹೊರಡಿಸಿರುವ ಪ್ರಕಟಣೆಯಂತೆ ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು

ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್ ಗಳನ್ನು ಸಲ್ಲಿಸಿರುತ್ತಾರೆ. ಇವರ ಆರ್ಥಿಕ ಬಿಡ್‌ನ್ನು ದಿನಾಂಕ 25–09–09ರಂದು ಪರಿಶೀಲಿಸಿದ್ದು ಅವರು ಸೂಚಿಸಿರುವ ದರಗಳ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,57,81,410/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 1,69,63,840/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಮೆ॥ ಆರ್.ಎನ್.ಎ. ಇಂಜಿನಿಯರ್ಸ್ ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರು | ರೂ. 1,93,55,628/– | 22.65 ಹೆಚ್ಚು | 14.09 ಹೆಚ್ಚು |

ಮೇಲ್ಕಂಡಂತೆ ಮೆ॥ ಆರ್.ಎನ್.ವಿ. ಇಂಜಿನಿಯರ್ಸ್ ಪ್ರೈ. ಲಿ., 1ನೇ ದರ್ಜೆ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ ಹಾಗೂ ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.09 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 02–01–10ರಂದು ಇಲಾಖೆ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,69,63,840–00 ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,93,38,778–00 ಗಳಿಗೆ ಕಾಮಗಾರಿಯನ್ನು ಮೆ॥ ಆರ್.ಎನ್.ಎ. ಇಂಜಿನಿಯರ್ಸ್ ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 46 ಏನಿಯೋ 2009, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಗುಡ್ಡದ ತುಮ್ಮಿನಕಟ್ಟೆ ಗ್ರಾಮದ ಬಳಿ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,69,63,840–00 ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,93,38,778–00 ಗಳಿಗೆ (ಒಂದು ಕೋಟಿ ತೊಂಭತ್ಮೂರು ಲಕ್ಷದ ಮೂವತ್ತೆಂಟು ಸಾವಿರದ ಏಳುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಮೆ॥ ಆರ್.ಎನ್.ಎ. ಇಂಜಿನಿಯರ್ಸ್ ಪ್ರೈ. ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್ ಪಿ 2002, ದಿನಾಂಕ: 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.380

**(ವಿ. ಗೋವಿಂದರಾಜ್)**
ಸರ್ಕಾರದ ಉಪ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಕವಲೇದುರ್ಗ ಕೆರೆ ಅಭಿವೃದಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009 (2), ದಿನಾಂಕ 04–2–09.
2. ಪತ್ರ ಸಂಖ್ಯೆ: ಮುಸ(ದ)/ತಾಂ–3/ಸ.ಇಂ–8/ಶಿವಮೊಗ್ಗ/2009–10/4650, ದಿನಾಂಕ 02–12–09.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/134, ದಿನಾಂಕ: 13–01–10

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 04–02–09ರ ಆದೇಶದಲ್ಲಿ 4702–00–101–1–07–139–ಕೆರೆಗಳ ಆಧುನೀಕರಣ ಶೀರ್ಷಿಕೆಯಡಿಯಲ್ಲಿ ರೂ. 480.00 ಲಕ್ಷ ಅಂದಾಜು ಮೊತ್ತದ 10 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ 40.00 ಲಕ್ಷ ರೂ.ಗಳ ಅಂದಾಜಿನ ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಕವಲೇದುರ್ಗ ಕೆರೆ ಅಭಿವೃದ್ಧಿ ಕಾಮಗಾರಿಯೂ ಒಂದಾಗಿದೆ..

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 31–01–2009 |
| 2 | ಪ್ರಜಾವಾಣಿ ದಿನಪತ್ರಿಕೆ | ದಿ: 10–02–2009 |

ಕಾರಣಾಂತರಗಳಿಂದ ಟೆಂಡರ್ ಅವಧಿಯನ್ನು ವಿಸ್ತರಿಸಿದ್ದು, ಅಂತಿಮವಾಗಿ ದಿನಾಂಕ 22–06–09ರಂದು ಪ್ರಕಟಣೆ ಹೊರಡಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 13 ಗುತ್ತಿಗೆದಾರರ ಪೈಕಿ 4 ಜನ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇದರಲ್ಲಿ 3 ಜನ ಗುತ್ತಿಗೆದಾರರ ಟೆಂಡರ್‌ಗಳನ್ನು ಕೆಲವು ಕಾರಣಗಳಿಂದ ತಿರಸ್ಕರಿಸಿ ಅರ್ಹರಾದ ಒಬ್ಬ ಗುತ್ತಿಗೆದಾರರ ಟೆಂಡರ್ ದಿನಾಂಕ: 08–07–09ರಂದು ತೆರೆಯಲಾಗಿದೆ. ವಿವರ ಕೆಳಕಂಡಳತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 39,64,146/– |
| ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್ ಗೆ ಇಡಲಾದ ಪರಿಷ್ಕೃತ ಮೊತ್ತ | ರೂ. 37,90,130/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|
| 1 | ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು | ರೂ. 47,54,758/- | 25.45 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ಏಕೈಕ ಅರ್ಹ ಟೆಂಡರ್ ದಾರರಾಗಿದ್ದು, ಇವರು ನಮೋದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 25.45 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 02-01-10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 37,90,130-00 ಗಳ ಮೇಲೆ ಶೇಕಡ 12.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 42,44,946-00 ಗಳಿಗೆ ಕಾಮಗಾರಿಯನ್ನು ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 79 ಕೆಜಿದು 2009, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಕವಲೇದುರ್ಗ ಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 37,90,130-00 ಗಳ ಮೇಲೆ ಶೇಕಡ 12.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 42,44,946-00 ಗಳಿಗೆ (ನಲವತ್ತೆರಡು ಲಕ್ಷದ ನಲವತ್ತ್ನಾಲ್ಕು ಸಾವಿರದ ಒಂಭೈನೂರ ನಲವತ್ತಾರು ರೂ.ಗಳು ಮಾತ್ರ) ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆಗುತ್ತಿಗೆದಾರರು, ಶಿವಮೊಗ್ಗ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-1-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.381

**(ವಿ. ಗೋವಿಂದರಾಜ್)**
ಸರ್ಕಾರದ ಉಪ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕಿನ ಹುಂಚ ಹೋಬಳಿ ಕಲ್ಲೂರು ಗ್ರಾಮದ ಹತ್ತಿರ ಕುಮದ್ವತಿ ನದಿಗೆ ಪಿಕಪ್ ನಿರ್ಮಿಸಿ ಏತ ನೀರಾವರಿ ಯೋಜನೆ ಕಲ್ಪಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು

**ಓದಲಾಗಿದೆ:** 1. ಪತ್ರ ಸಂಖ್ಯೆ: ಮುಸದ/ತಾಂ-3/ಸ.ಇಂ-8/ಶಿವಮೊಗ್ಗ/ಟೆಂಡರ್/2009-10/4649, ದಿನಾಂಕ 07-11-09.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 13-01-10ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09-10/134.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕಿನ ಹುಂಚ ಹೋಬಳಿ ಕಲ್ಲೂರು ಗ್ರಾಮದ ಹತ್ತಿರ ಕುಮದ್ವತಿ ನದಿಗೆ ಪಿಕಪ್ ನಿರ್ಮಿಸಿ ಏತ ನೀರಾವರಿ ಯೋಜನೆ ಕಲ್ಪಿಸುವ ಕಾಮಗಾರಿಯ 25.00 ಲಕ್ಷ ರೂ.ಗಳ ಅಂದಾಜಿಗೆ ವಿಶೇಷ ಘಟಕ ಯೋಜನೆ ಏತ ನೀರಾವರಿ ಯೋಜನೆ ಶೀರ್ಷಿಕೆ ಅಡಿ ಸಿ.ಇ.ಆರ್. ಸಂಖ್ಯೆ:258/2008-09, ದಿನಾಂಕ 10-02-09ರಂದು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 13-02-2009 |
| 2 | ಪ್ರಜಾವಾಣಿ ದಿನಪತ್ರಿಕೆ | ದಿ: 17-02-2009 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 02-09-09ರಂದು ತಿದ್ದುಪಡಿ ಪ್ರಕಟಣೆಯನ್ನು ಪ್ರಕಟಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಅವರು ಸೂಚಿಸಿರುವ ದರಗಳ ವಿವರ ಕೆಳಕಂಡತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 23,78,420/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 23,52,983/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರು | ರೂ. 28,37,202/- | 19.29 ಹೆಚ್ಚು | 20.58 ಹೆಚ್ಚು |
| 2 | ಎಸ್.ಕೆ. ಸಿದ್ದಲಿಂಗಪ್ಪ, 1ನೇ ದರ್ಜೆ ಗುತ್ತಿಗೆದಾರರು | ರೂ. 29,43,603/- | 23.76 ಹೆಚ್ಚು | 25.10 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್ ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.58 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 02-01-10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 23,52,983-00 ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 26,82,401-00 ಗಳಿಗೆ ಕಾಮಗಾರಿಯನ್ನು ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 44 ಏನೀಯೋ 2009, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕಿನ ಹುಂಚ ಹೋಬಳಿ ಕಲ್ಲೂರು ಗ್ರಾಮದ ಹತ್ತಿರ ಕುಮದ್ವತಿ ನದಿಗೆ ಪಿಕಪ್ ನಿರ್ಮಿಸಿ ಏತ ನೀರಾವರಿ ಯೋಜನೆ ಕಲ್ಪಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 23,52,983-00 ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 26,82,401-00 ಗಳಿಗೆ (ಇಪ್ಪತ್ತಾರು ಲಕ್ಷದ ಎಂಭತ್ತೆರಡು ಸಾವಿರದ ನಾನೂರ ಒಂದು ರೂ.ಗಳು ಮಾತ್ರ) ಶ್ರೀ ಕೆ. ಮೇಲಗಿರಿಯಪ್ಪ, 1ನೇ ದರ್ಜೆಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-1-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.382

**(ವಿ. ಗೋವಿಂದರಾಜ್)**
ಸರ್ಕಾರದ ಉಪ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಕುಮಟಾ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಯೋಜನೆಯ ಅಂದಾಜು ಮೊತ್ತ ರೂ. 3500.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ: ಕಜಮಂ/ಮುಅ(ಉ)/ಆಶ್ರೇಕಾಅ/ಉಮುಅ-1/ತಾಸ-5/ಸಅ-2/ಕುಮಟಾ/1655/2009-10 ದಿನಾಂಕ: 16.09.2009.

**ಪ್ರಸ್ತಾವನೆ :**

ಕುಮಟಾ ಪಟ್ಟಣವು ಉತ್ತರ ಕನ್ನಡ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು 2001ನೇ ಸಾಲಿನ ಜನಗಣತಿಯ ಪ್ರಕಾರ ಈ ಪಟ್ಟಣದ ಜನಸಂಖ್ಯೆಯು 27598 ಇದ್ದು, ಪ್ರಸ್ತುತ 35000 ಇರುತ್ತದೆ. 2026ನೇ ಇಸವಿಯ ಮಧ್ಯಂತರ ಘಟ್ಟದಲ್ಲಿ 36,428 ಹಾಗೂ ಅಂತಿಮ ಘಟ್ಟ 2041ರಲ್ಲಿ 44030 ಜನಸಂಖ್ಯೆಯನ್ನು ನಿರೀಕ್ಷಿಸಲಾಗಿದೆ. ಹಾಲಿ ಈ ಪಟ್ಟಣಕ್ಕೆ ದಿವಳ್ಳಿ ಗ್ರಾಮದ ಹತ್ತಿರ ಇರುವ ಅಘನಾಶಿನಿ ನದಿ ಮೂಲವಾಗಿಟ್ಟುಕೊಂಡು 2021ರಲ್ಲಿ ಅಂದಾಜಿಸಲಾದ 35000 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್ ನೀರು ಪರಿಗಣಿಸಿ ವಿನ್ಯಾಸಿಸಲಾಗಿದ್ದು, ಪ್ರಸ್ತುತ ತಲಾ ದಿನಂಪ್ರತಿ 100 ಲೀಟರ್ ನೀರು

ಸರಬರಾಜು ಮಾಡಲಾಗುತ್ತಿದೆ. ಸದರಿ ನೀರು ಸರಬರಾಜು ನಿರ್ವಹಣೆಯನ್ನು ಸ್ಥಳೀಯ ಸಂಸ್ಥೆ ನಿರ್ವಹಿಸುತ್ತಿದ್ದು, ಪ್ರಸ್ತುತ ನೀರು ಸರಬರಾಜು ಸ್ಥಿತಿಯನ್ನು ಕೊಳವೆ ಬಾವಿ ಮತ್ತು ತೆರೆದ ಬಾವಿ ಮೂಲಗಳಿಂದ ಉತ್ತಮಪಡಿಸಬಹುದಾಗಿದೆ.

ಕುಮಟಾ ಪಟ್ಟಣದಲ್ಲಿ ಪ್ರಸ್ತುತ ಒಳಚರಂಡಿ ಯೋಜನೆ ಇರುವುದಿಲ್ಲ. ಆದರೆ, ಕೆಲವು ಬಡಾವಣೆಗಳಲ್ಲಿ ಸೆಪ್ಟಿಕ್ ಟ್ಯಾಂಕ್ ಮತ್ತು ಇಂಗುತೊಟ್ಟಿಯ ಮೂಲಕ ವೈಯಕ್ತಿಕ ನೆಲೆಗಟ್ಟಿನಲ್ಲಿ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ನಾಗರೀಕರ ಆರೋಗ್ಯ ಮತ್ತು ನೈರ್ಮಲ್ಯ ದೃಷ್ಟಿಯಿಂದ ಒಳಚರಂಡಿ ಯೋಜನೆ ಅವಶ್ಯಕತೆ ಇರುತ್ತದೆ. ಆದ್ದರಿಂದ ಮಂಡಳಿ ಮತ್ತು ಲೋಕೋಪಯೋಗಿ ಇಲಾಖೆಯ 2009-10ನೇ ದರಪಟ್ಟಿಯನ್ವಯ ಯೋಜನೆಯ ಅಂದಾಜನ್ನು ರೂ. 3500.00 ಲಕ್ಷಗಳಿಗೆ ತಯಾರಿಸಿ ಒಳಚರಂಡಿ ಯೋಜನೆಯಡಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಸಲ್ಲಿಸಿರುತ್ತಾರೆ.

| | | |
|---|---|---|
| ರಾಜ್ಯ ಸರ್ಕಾರದ ಸಾಲ | ಶೇ. 30 | ರೂ. 1050.00 ಲಕ್ಷಗಳು |
| ಆರ್ಥಿಕ ಸಂಸ್ಥೆಯಿಂದ ಸಾಲ | ಶೇ. 50 | ರೂ. 1750.00 ಲಕ್ಷಗಳು |
| ಸ್ಥಳೀಯ ಸಂಸ್ಥೆ ವಂತಿಕೆ | ಶೇ. 20 | ರೂ. 700.00 ಲಕ್ಷಗಳು |
| | | ಒಟ್ಟು ರೂ. 3500.00 ಲಕ್ಷಗಳು |

ಸದರಿ ಯೋಜನೆಯನ್ನು 2009-10ನೇ ಸಾಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕ್ರಿಯಾ ಯೋಜನೆಯ ಪ್ರವರ್ಗ-ಡಿಯಡಿಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ರೂ. 1167.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 18 ಯುಡಿಎಸ್ 2009, ಬೆಂಗಳೂರು, ದಿನಾಂಕ 08.02.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಈ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ ಕುಮಟಾ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 3500.00 ಲಕ್ಷಗಳಲ್ಲಿ ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು "ಒಳಚರಂಡಿ ಯೋಜನೆಯಡಿ" ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No escalation charges are allowed and the estimates should be revised accordingly.
2. Water rates as proposed by KUWS&DB have to be implemented to meet O&M cost.
3. KTPP provisions, quality control and timely completion of the project should be ensured.
4. ETP, WCE and contingencies all together should be within 5% and the estimate should be revised accordingly.
5. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 859 Exp-9:2009 ದಿನಾಂಕ 8.01.2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 396

**(ಸಿ.ಟಿ. ನಾರಾಯಣಸ್ವಾಮಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಸಿದ್ರಾಮಪೂರ ಮತ್ತು ಯರಗೇರಾ ರಸ್ತೆಯ ಹತ್ತಿರ ಒಟ್ಟು 51.21 ಎಕರೆ ಪ್ರದೇಶದಲ್ಲಿ ವಸತಿ ಯೋಜನೆ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ದಿನಾಂಕ 24.11.2009.

**ಪ್ರಸ್ತಾವನೆ :**

ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕು ರಾಯಚೂರು ಗ್ರಾಮದ ಸ.ನಂ. 1116 ರಿಂದ 1121 ರಲ್ಲಿ ಒಟ್ಟು 21 ಎಕರೆ 38 ಗುಂಟೆ ಜಮೀನನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 35ರನ್ವಯ ಪರಸ್ಪರ ಒಪ್ಪಂದದ ಮೇರೆಗೆ ಭೂ ಮಾಲೀಕರಿಂದ ಖರೀದಿ ಮಾಡಿ ಭೂ ಸ್ವಾಧೀನಪಡಿಸಿಕೊಳ್ಳಲು ಸರ್ಕಾರವು ಪತ್ರ ಸಂಖ್ಯೆ:ನಅಇ 40 ಗುಅಪ್ರಾ 2007, ದಿನಾಂಕ 17.08.2007 ರಲ್ಲಿ ಅನುಮೋದನೆ ನೀಡಿದೆ. ಇದಲ್ಲದೆ ಸರ್ಕಾರದ ಪತ್ರ ಸಂಖ್ಯೆ:ಕಂ.ಇ:7:ಎಲ್‌ಜಿಆರ್:2007. ದಿನಾಂಕ 23.03.2007ರಲ್ಲಿ ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕು, ರಾಯಚೂರು ಗ್ರಾಮದ ಸರ್ಕಾರಿ ಜಮೀನು ಸ.ನಂ. 1122 ರಲ್ಲಿನ 29 ಎಕರೆ 23 ಗುಂಟೆ ಜಮೀನನ್ನು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ವಸತಿ ಯೋಜನೆ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮ 1969 20(ಸಿ) ಪ್ರಕಾರ ಆಗಿನ ಪ್ರಚಲಿತ ಮಾರುಕಟ್ಟೆ ದರದ ಪ್ರತಿ ಶತ 50% ರಂತೆ ಬೆಲೆ ನಿಗದಿಪಡಿಸಿ ಖರೀದಿಸಲಾಗಿದೆ. ಸದರಿ ಜಮೀನನ್ನು ಒಳಗೊಂಡಂತೆ ಒಟ್ಟು 51 ಎಕರೆ 21 ಗುಂಟೆ ವಿಸ್ತೀರ್ಣದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಪ್ರಾಧಿಕಾರವು ಪ್ರಸ್ತಾಪಿಸಿರುತ್ತದೆ.

ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ರಾಯಚೂರು ರವರು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ರಾಯಚೂರು–ಮಂತ್ರಾಲಯಂ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಸಿದ್ರಾಮಪೂರ ಮತ್ತು ಯರಗೇರಾ ರಸ್ತೆಯ ನವೋದಯ ಮೆಡಿಕಲ್ ಕಾಲೇಜು ಹತ್ತಿರ ರೂ. 1398.39 ಲಕ್ಷಗಳ ವೆಚ್ಚದಲ್ಲಿ ಮೇಲೆ ತಿಳಿಸಿದ ಒಟ್ಟು ವಿಸ್ತೀರ್ಣ 51 ಎಕರೆ 21 ಗುಂಟೆ ಜಮೀನಿನಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಯೋಜನೆಯಡಿ, ಒಟ್ಟು 652 ನಿವೇಶನಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದ್ದು, ಭೂ ಸ್ವಾಧೀನದ ವೆಚ್ಚ, ಸಿವಿಲ್ ಕಾಮಗಾರಿಗಳ ವೆಚ್ಚ, ನೀರು ಸರಬರಾಜು, ಒಳಚರಂಡಿ, ವಿದ್ಯುತ್ ಸರಬರಾಜು ವ್ಯವಸ್ಥೆ, ಇತ್ಯಾದಿ ವೆಚ್ಚಗಳನ್ನೊಳಗೊಂಡ ಅಂದಾಜು ಪಟ್ಟಿಯನ್ನು ಈ ಕೆಳಕಂಡಂತೆ ಸಲ್ಲಿಸಲಾಗಿದೆ.

| | | | | |
|---|---|---|---|---|
| 1) | ಭೂ ಸ್ವಾಧೀನದ ಅಂದಾಜು ವೆಚ್ಚ | ರೂ. | 187.62 | ಲಕ್ಷಗಳು |
| 2) | ವಿದ್ಯುತ್ ಸೌಲಭ್ಯಕ್ಕೆ (ಜೆಸ್ಕಾಮ್) | ರೂ. | 150.91 | ಲಕ್ಷಗಳು |
| 3) | ಸಿವಿಲ್ ಕಾಮಗಾರಿಗಳ ವೆಚ್ಚ (ಪಿಡಬ್ಲ್ಯೂಡಿ) | ರೂ. | 513.00 | ಲಕ್ಷಗಳು |
| 4) | ನೀರು ಸರಬರಾಜು ವೆಚ್ಚ (ಕನನೀಸಒಚಮಂ) | ರೂ. | 108.30 | ಲಕ್ಷಗಳು |
| 5) | ಒಳಚರಂಡಿ ವ್ಯವಸ್ಥೆ (ಕನನೀಸಒಚಮಂ) | ರೂ. | 124.50 | ಲಕ್ಷಗಳು |
| 6) | ಟೆಂಡರ್ ಪ್ರೀಮಿಯಂ | ರೂ. | 89.50 | ಲಕ್ಷಗಳು |
| 7) | ಬ್ಯಾಂಕ್ ಸಾಲಕ್ಕೆ ಬಡ್ಡಿ | ರೂ. | 65.00 | ಲಕ್ಷಗಳು |
| 8) | ಕಾರ್ಯಪ್ರಗತಿಯಲ್ಲಿ ಆಗಬಹುದಾದ ಹೆಚ್ಚಳ | ರೂ. | 89.50 | ಲಕ್ಷಗಳು |
| 9) | 10% ಅಭಿವೃದ್ಧಿ ವೆಚ್ಚ | ರೂ. | 70.06 | ಲಕ್ಷಗಳು |
| | | ರೂ. | 1398.39 | ಲಕ್ಷಗಳು |

ಸದರಿ ಯೋಜನೆಯಡಿಯಲ್ಲಿ ನಿವೇಶನಗಳ ಮಾರಾಟದಿಂದ ಒಟ್ಟು ರೂ. 23,41,67,010.00 ಗಳ ಆದಾಯವನ್ನು ಅಂದಾಜಿಸಲಾಗಿದೆ ಮತ್ತು ಪ್ರಾಧಿಕಾರಕ್ಕೆ ಒಟ್ಟು ಲಾಭ ರೂ. 9,44,02,769.00 ಗಳ ಮೊತ್ತವನ್ನು ನಿರೀಕ್ಷಿಸಲಾಗಿದೆ. ಯೋಜನೆಯ ಅಭಿವೃದ್ಧಿಗೆ ಅಗತ್ಯವಿರುವ ಮೊತ್ತವನ್ನು ಪ್ರಗತಿ ಗ್ರಾಮೀಣ ಬ್ಯಾಂಕ್, ತೀನ್‌ಕಂದಿಲ್ ರಾಯಚೂರು ರವರು ಎರಡು ಯೋಜನೆಗಳಿಂದ ಒಟ್ಟು ರೂ. 6.50 ಕೋಟಿಗಳ ಸಾಲವನ್ನು ನೀಡಲು ಮಂಜೂರು ಮಾಡಿದ್ದು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು 2009–10ನೇ ಸಾಲಿನ ಆಯವ್ಯಯದಲ್ಲಿ ಒಟ್ಟು ರೂ. 5.00 ಕೋಟಿಗಳ ಮೊತ್ತವನ್ನು ನಿಗದಿಪಡಿಸಿದ್ದು, ಉಳಿದ ಮೊತ್ತವನ್ನು ಅರ್ಜಿಗಳನ್ನು ಆಹ್ವಾನಿಸುವ ಸಮಯದಲ್ಲಿ ಕ್ರೋಢೀಕರಿಸಲು ಉದ್ದೇಶಿಸಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 203 ಗುಅಪ್ರಾ 2009 ಬೆಂಗಳೂರು, ದಿನಾಂಕ: 05.02.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು ರಾಯಚೂರು–ಮಂತ್ರಾಲಯಂ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಸಿದ್ರಾಮಪೂರ ಮತ್ತು ಯರಗೇರಾ ರಸ್ತೆಯ ನವೋದಯ ಮೆಡಿಕಲ್ ಕಾಲೇಜು ಹತ್ತಿರ, ರಾಯಚೂರು ತಾಲ್ಲೂಕು ರಾಯಚೂರು ಗ್ರಾಮದ ಸ.ನ. 1116 ರಿಂದ 1121 ರಲ್ಲಿ ಒಟ್ಟು 21 ಎಕರೆ 38 ಗುಂಟೆ, ಮತ್ತು ಸ.ನಂ. 1122 ರಲ್ಲಿನ 29 ಎಕರೆ 23 ಗುಂಟೆ ಒಟ್ಟು ವಿಸ್ತೀರ್ಣ 51 ಎಕರೆ 21 ಗುಂಟೆ ಜಮೀನಿನಲ್ಲಿ ಒಟ್ಟು ರೂ. 1398.39 ಲಕ್ಷಗಳ ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ 18 (3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. Sites should be priced, keeping in view the cost escalation in the future and ensuring that full recovery of the cost of the land and development charges is made.
2. Sites so formed should be allotted as per allotment rules.
3. Corner sites and commercial sites should be put to public auction as per rules, in order to get more revenue.
4. Allotment of sites should be made before the development of the layout begins so that allottees can monitor the development of the layout which will avoid cost overrun.
5. ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000 ನ್ನು ಪಾಲಿಸತಕ್ಕದ್ದು.
6. ಕಾಮಗಾರಿಗಳ ಟೆಂಡರ್‌ಗಳನ್ನು ಕರೆಯುವ ಮುನ್ನ ಸರ್ಕಾರದ ಅನುಮೋದನೆ ಪಡೆದು ಆಹ್ವಾನಿಸತಕ್ಕದ್ದು.
7. ಕಾಮಗಾರಿಗಳ ಗುತ್ತಿಗೆ ನೀಡುವ ಮುನ್ನ ನಿಯಮಾವಳಿಯಂತೆ ಸರ್ಕಾರದ ಅನುಮೋದನೆ ಪಡೆದು ಗುತ್ತಿಗೆಯನ್ನು ನೀಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : FD 851 Exp-9:2009, ದಿನಾಂಕ : 11–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 397

**(ಸಿ. ಟಿ. ನಾರಾಯಣ ಸ್ವಾಮಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## INFRASTRUCTURE DEVELOPMENT SECRETARIAT

**Sub :** Release of funds towards cost sharing Project of Bangalore – Mysore Doubling Railway Project.

**Read :**
1. G.O. No. IDD 1 NSW 2002 dated 22.11.2002
2. G.O. No. IDD 1 NSW 2002 dated 22.03.2002
3. G.O. No. IDD 1 NSW 2002 dated 19.02.2003
4. G.O. No. IDD 47 NSW 2003 dated 12.09.2003
5. G.O. No. IDD 47 NSW 2003 dated 22.01.2004
6. G.O. No. IDD 47 NSW 2003 (P) dated 26.03.2004
7. G.O. No. IDD 51 NSW 2004 dated 19.07.2004
8. G.O. No. IDD 63 IDM 2005 dated 25.05.2005

9 G.O. No. IDD 66 NSW 2005 dated 15.12.2005
10 G.O. No. IDD 68 NSW 2003 dated 30.08.2006
11 G.O. No. IDD 68 NSW 2003 dated 24.07.2007
12 G.O. No. IDD 101 NSW 2007 dated 25.04.2008
13 G.O. No. IDD 101 NSW 2007 dated 25.10.2008
14 G.O. No. IDD 101 NSW 2007 dated 04.03.2009
15 G.O. No. IDD 101 NSW 2007 dated 28.03.2009
16 G.O. No. IDD 101 NSW 2007 dated 31.03.2009
17 G.O. No. IDD 101 NSW 2007 dated 18.12.2009
18 Letter No. W. 63/B/CN/BNC. Genl dated 27.01.2010 of CE (Con.,) SWR, Bangalore.

**Preamble:**

The Government of Karnataka has so far released an amount of Rs.115.61 crore towards its share of the investment on cost sharing projects through various Government orders read at SL.No. (1) to (17) above.

2. The Chief Engineer (Con.,), South Western Railway, Bangalore in his letter read at Sl No. (18) above, has stated that the total expenses of the project upto 31.3.10 is Rs. 195.42 crore and out of it 2/3 share of GoK is Rs. 130.28 crore and has requested to arrange to deposit balance Government of Karnataka's share amount towards cost sharing work doubling between Bangalore-Kengeri-Ramanagaram-Mysore.

3. Government of Karnataka after examining the request of railways has decided to release an amount of Rs. 21.38 crore (Twenty One Crore Thirty Eight Lakhs only) towards doubling of railway track between Bangalore-Kengeri-Ramanagaram-Mysore during 2009-10. Hence this Order.

**Government Order No. IDD 101 NSW 2007, Bangalore, Dated 5th February 2010**

After careful examination of the request of railways, Government is pleased to release an amount of Rs. 21.38 crore (Twenty One Crore Thirty Eight Lakhs Only) being the part of the balance 2/3 share of GoK under the head of account 5465-01-190-3-08 Bangalore-Kengeri-Ramanagaram-Mysore. Railway doubling (P) other expenditure towards doubling of Railway Track between Bangalore-Kengeri, Ramanagaram-Mysore.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This Order is issued in accordance with the financial Powers delegated to Principal Secretaries/Secretaries vide G.O. No. FD 112 EXP-1 dated 02.02.2010.

By Order and in the name of the Governor of Karnataka,

PR. 398

**(N. Manjula Geetha)**
Under Secretary to Government,
Infrastructure Development Department

## ಆರ್ಥಿಕ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯು ಅನುಮತಿ ನೀಡಿದೆ ಎಂದು ಭಾವಿಸಬಹುದಾದ ಸಂದರ್ಭಗಳು–ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಆದೇಶವನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96
2 ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 4 ಟಿಎಫ್‌ಪಿ 99(1), ದಿನಾಂಕ 15.10.99
3 ಅಧಿಸೂಚನೆ ಸಂಖ್ಯೆ: ಸಿಆಸುಇ 1 ಎಸ್‌ಎಂಆರ್ 2000 ದಿನಾಂಕ 22.01.2001
4 ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2(1) ಟಿಎಫ್‌ಪಿ 2001, ದಿನಾಂಕ 17.4.2001
5 ಸರ್ಕಾರಿ ಸೇರ್ಪಡೆ ಆದೇಶ ಸಂಖ್ಯೆ : ಎಫ್‌ಡಿ 02 ಟಿಎಫ್‌ಪಿ 01, ದಿನಾಂಕ 10.7.2001
6 ಅಧಿಸೂಚನೆ ಸಂಖ್ಯೆ: ಸಿಆಸುಇ 2 ಎಸ್‌ಎಂಆರ್ 2008 ದಿನಾಂಕ 24.10.2009
7 ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 16 ಎಸ್‌ಎಂಆರ್ 2009 ದಿನಾಂಕ 12.11.2009

**ಪ್ರಸ್ತಾವನೆ :**

ಮೇಲಿನ ಕ್ರಮಾಂಕ (1) ಮತ್ತು (2) ರಲ್ಲಿ ಉಲ್ಲೇಖಿಸಲಾದ ಸರ್ಕಾರಿ ಆದೇಶಗಳಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು, 1977 ರ ನಿಯಮ 45 ರಲ್ಲಿ ಉದ್ದೇಶಿಸಿದಂತೆ ತನ್ನ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸಬಹುದಾದ ಪ್ರಕರಣಗಳನ್ನು ಆದೇಶದ ಅನುಬಂಧದಲ್ಲಿ ನಮೂದಿಸಿದಂತೆ ಗೊತ್ತುಪಡಿಸಿದೆ.

ಮೇಲೆ (4) ಮತ್ತು (5) ರಲ್ಲಿ ಓದಲಾದ ಆದೇಶಗಳಲ್ಲಿ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ 1963 ರಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಪೂರೈಸುವುದರ ನಿಬಂಧನೆಗಳಿಗೆ ಒಳಪಟ್ಟು ಗ್ರೂಪ್ 'ಎ' ಮತ್ತು 'ಬಿ' ದರ್ಜೆಯ ಅಧಿಕಾರಿಗಳು ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 1, ಎಸ್‌ಎಂಆರ್ 2000 ದಿನಾಂಕ 22.1.2001 ರ ಷೆಡ್ಯೂಲ್–1 ರಲ್ಲಿ ಸೂಚಿಸಿರುವ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಲು ಷೆಡ್ಯೂಲ್ 2 ಮತ್ತು 3 ರಲ್ಲಿ ಸೂಚಿಸಿದ ದರಗಳಂತೆ ಪಡೆಯುವ ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಮಂಜೂರು ಮಾಡಲು ಇಲಾಖಾ ಕಾರ್ಯದರ್ಶಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿತ್ತು.

ಮೇಲೆ ಕ್ರಮಾಂಕ (6) ರಲ್ಲಿನ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963 ಕ್ಕೆ ಮಾಡಿರುವ ತಿದ್ದುಪಡಿಗಳಲ್ಲಿ ನಿಯಮ 14 ಕ್ಕೆ ಸಂಬಂಧಪಟ್ಟಂತೆ ಅನುಸೂಚಿ–2 ಹಾಗೂ ಅನುಸೂಚಿ–3 ನ್ನು ಕೈಬಿಡಲಾಗಿದ್ದು ಸಿ.ಜಿ.ಹೆಚ್.ಎಸ್. ದರಗಳನ್ನು ಅಳವಡಿಸಿಕೊಂಡಿರುವುದರಿಂದ ಮುಂಗಡ ಠೇವಣಿ ಮಂಜೂರಾತಿಯ ಆದೇಶಗಳನ್ನು ಸೂಕ್ತವಾಗಿ ಪರಿಷ್ಕರಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧೀನ ಕಾರ್ಯದರ್ಶಿಯವರು ದಿನಾಂಕ 12.11.2009 ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 9 ಟಿಎಫ್‌ಪಿ 2009, (1) ಬೆಂಗಳೂರು, ದಿನಾಂಕ: 12.01.2010**

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2(1) ಟಿಎಫ್‌ಪಿ 2001 ದಿನಾಂಕ 17–4–2001 ಮತ್ತು ದಿನಾಂಕ 10–7–2001 ರ ಸೇರ್ಪಡೆ ಆದೇಶವನ್ನು ಈ ಕೆಳಗಿನಂತೆ ಮಾರ್ಪಡಿಸಲಾಗಿದೆ.

ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ 10–7–1996 ರ ಸರ್ಕಾರಿ ಆದೇಶದ ಅನುಬಂಧದ ಕ್ರಮ ಸಂಖ್ಯೆ 55 ರ ನಂತರ ಈ ಕೆಳಕಂಡ ಅಂಶವನ್ನು 55 (1) ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

"ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ 1963 ರಲ್ಲಿ ನಿಗದಿ ಪಡಿಸಿರುವ ಷರತ್ತುಗಳನ್ನು ಪೂರೈಸುವುದರ ನಿಬಂಧನೆಗಳಿಗೆ ಒಳಪಟ್ಟು ಗ್ರೂಪ್ 'ಎ' ಮತ್ತು 'ಬಿ' ದರ್ಜೆಯ ಅಧಿಕಾರಿಗಳು ಸದರಿ ನಿಯಮಗಳ ಷೆಡ್ಯೂಲ್

1 ರಲ್ಲಿ ಸೂಚಿಸಿರುವ ಆಸ್ಪತ್ರೆಗಳಲ್ಲಿ, ಚಿಕಿತ್ಸೆ ಪಡೆಯಲು ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಆಸುಇ 2 ಎಸ್‌ಎಂಆರ್ 2008 ದಿನಾಂಕ 24–10–2009 ರ ಕಂಡಿಕೆ 5(ii)(3) ರಲ್ಲಿ ವಿವರಿಸಿರುವಂತೆ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಕೇಂದ್ರ ಸರ್ಕಾರದ ಆರೋಗ್ಯ ಸೇವೆಗಳಡಿಯಲ್ಲಿ (CGHS) ಕಾಲಕಾಲಕ್ಕೆ ವಿವಿಧ ರೋಗ ನಿರ್ಣಯ ವಿಧಾನಗಳಿಗೆ ಮತ್ತು ಚಿಕಿತ್ಸೆಗಳಿಗೆ ನಿಗದಿಪಡಿಸುವ ದರಗಳಂತೆ ಪಡೆಯುವ ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಮಾಡಲು ಮಂಜೂರಾತಿ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 399

(ಸಿ. **ಶಾಮರಾವ್**)

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಲ್ಯಾನ್ಕೊ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 145.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/ಎಲ್‌ಡಬ್ಲ್ಯುಪಿಪಿಎಲ್/2007/2562 ದಿನಾಂಕ 29/01.11.2007. ಸಂಖ್ಯೆ: ಕೆಆರ್‌ಇಡಿ/08/ಎಲ್‌ಡಬ್ಲ್ಯುಪಿಪಿಎಲ್/2007/2561 ದಿನಾಂಕ 29.11.2007/1.12.2007 ಮತ್ತು ಸಂಖ್ಯೆ: ಕೆಆರ್‌ಇಡಿ/08/ಎಲ್‌ಡಬ್ಲ್ಯುಪಿಪಿಎಲ್/2007/2560 ದಿನಾಂಕ 29.11.2007/01.12.2007.

2 ದಿನಾಂಕ 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಲ್ಯಾನ್ಕೊ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೀದರ್, ಗುಲ್ಬರ್ಗಾ, ಚಿಕ್ಕಮಗಳೂರು, ಮೈಸೂರು, ಬೆಂಗಳೂರು, ಧಾರವಾಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಒಟ್ಟು 177.9 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಲ್ಯಾನ್ಕೊ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 145.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಸೀಮಿತಗೊಳಿಸಿ ಗುಲ್ಬರ್ಗಾ, ಬೀದರ್, ಮೈಸೂರು, ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 426 ಎನ್‌ಸಿಇ 2007, ಬೆಂಗಳೂರು, ದಿನಾಂಕ: 4.02.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ॥ ಲ್ಯಾನ್ಕೊ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಗುಲ್ಬರ್ಗಾ, ಬೀದರ್, ಮೈಸೂರು, ಶಿವಮೊಗ್ಗ ಮತ್ತು ಧಾರವಾಡ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಈ ಕೆಳಗೆ ವಿವರಿಸಿದಂತೆ ಒಟ್ಟು 1449. ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ.

| Sl. No. | Toposheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| (1) | (2) | (3) | (4) | (5) |
| 1. | 56 G/6 | 22.15 MW | | Three independent areas named as Area (1), Area (2) & Area (3) are proposed for development of 22.15 MW capacity wind power project. The description of individual area is mentioned as below: |
| | | | Udbal, Bannahalli, Mudgul, Nirna, Nirnawadi, Basirapur, Minkhera, Manna Ekhelli, Nidvancha, **Bidar District.** | **Area (1) & Area (2): (10.75 MW):** These two areas are of high plains with no prominent orientations are situated on the North of Udbal and South of Manna Ekhelli. These two areas have the presence of forest and are having an open scrub features with moderate elevations as 642m and 643m respectively. These two areas are surrounded by no. of villages as mentioned in the column (4) and are covered in the following Geographical co-ordinates:<br>**Area (1)**<br>**Latitude :** 17º40º41''-17º42'20"N<br>**Longitude :** 77º15'51"-77º18'8" E<br>**Ridge peaks :** 637, 642m Amsl. Udbal RF<br>**Area (2)**<br>**Latitude :** 17º40º40''-17º4423"N<br>**Longitude :** 77º19'19"-77º22'20" E<br>**Ridge peaks :** 644, 646, 639, 605, 643, 625, 629, 641, 623, 598, 617, 595m Amsl. Naganakeri RF |
| | | | Chandrampalli, Chincholi RF, **Gulbarga District.** | **Area (3) (11.4 MW)** The proposed area is of complex in nature and is situated in the Chincholi RF. Further, the area has North-South orientation and is located on the South-East of Chandrampalli and spread across the following Geographical co-ordinates:<br>**Latitude :** 17º30'0"-17º32'0" N<br>**Longitude :** 77º28'8"-77º30'0" E<br>**Ridge peaks :** 618, 632, 643, 621m Amsl. |

| | | | | |
|---|---|---|---|---|
| 2. | 56 G/2 | 22.75 MW | | The firm has proposed three locations identified as (P), (Q) & (R). These Three locations are having similar topography and are mostly situated in the forest areas. Micro level details of these areas (P),(Q)&(R) are as below : |
| | | | Pandaragera, Mustapura, Sadlapura, Basantpura, **Bidar District** | **Area (P) : (4.5 MW) :** The earmarked area is of non-complex type and mostly covered with eucalyptus plantation & has dense scrub features as well and is located in the Reserved Forest. The area has gentle variation in elevation. The villages that are situated around are named in column (4) and held in the following Geographical co-ordinates:<br>**Latitude :** 17º42º39''-17º45'0"N<br>**Longitude :** 77º1'19"-77º5'15" E<br>**Ridge peaks :** 665m Amsl. |
| | | | Hankuni, Valkhindi, Rampura, Mudnal, Sindkhera, Borampalli, **Bidar District.** | **Area (Q) : (15.25 MW) :** It is of large plateau; has NE-SW orientation and part of the area has presence of eucalyptus plantation and the area is situated in Hudgi and Rampura RF. The identified area is covered in the following Geographical co-ordinates :<br>**Latitude :** 17º37º58''-17º45'0"N<br>**Longitude :** 77º7'6"-77º12'29" E<br>**Ridge peaks :** 637, 656, 646, 655, 663, 654, 627m Amsl. |
| | | | Chengta tanda, Kirni, Sontha tanda, **Gulbarga District.** | **Area (R) : (3 MW) :** It is a part of continued ridge with North-South orientation has presence of stony waste and situated on the North-West of Chengta tanda and spread in the following Geographical co-ordinates :<br>**Latitude :** 17º34º4''-17º35'20" N<br>**Longitude :** 77º5'15"-77º6'53" E<br>**Ridge peaks :** 616, 615m Amsl. |
| 3. | 56 G/5 | 34 MW | | The areas proposed consist of Part (A) and Part (B) The part (B) inturn', has three sub areas and are identified as Area (2), Area (3) & Area (4). |
| | | | Malasapur, Anadurvadi, Halahalli, Kamalpur, Nirmanalli, **Bidar District.** | **Part-A (10.5 MW) :** It is a large plateau has misture of open scrub and plantations. The area encircled situated around Nirmanalli Tanda. Further; the area has the presence of stone querry, |

| | | | | |
|---|---|---|---|---|
| | | | | state highway and evacuation lines. The villages covered in the areas are mentioned in column (4). The area has gentle elevation and is covered in the following co-ordinates :<br>**Latitude :** 17º52'35''-17º56'13" N<br>**Longitude :** 77º20'5"-77º23'40" E<br>**Ridge peaks :** 600, 665, 621, 635, 638, 610, 661m Amsl. |
| | | | Honnikere, Aliamber tanda, Kamthana, Zamistapur, Beluru, Chaundi, Markal, Yediapur, Kuttabad, **Bidar District.** | **Part-B (23.5 MW) :** The topography of these three areas are of high plains and non-complex in nature and are located in the Honnikere & Chittapura RF. The parts of these areas are having vegetation and open scrub features. These areas are located on the East of Honnikere, on the North-East of Kamthana and Kuttabad. The peaks of these areas and geographical co-ordinates are mentioned separately as below :<br>**Area (2) :**<br>**Latitude :** 17º57'19"-17º58'2" N<br>**Longitude :** 77º25'20"-77º26'20" E<br>**Area (3) :**<br>**Latitude :** 17º51'33"-17º57'15" N<br>**Longitude :** 77º27'0"-77º30'0" E<br>**Ridge peaks :** 670, 646, 666, 640, 661, 4, 629, 627, 6, 653, 624m Amsl.<br>**Area (4) :**<br>**Latitude :** 17º50'22"-17º51'19" N<br>**Longitude :** 77º29'1"-77º30'0" E<br>**Ridge peaks :** 652m Amsl. |
| 4 | 58E/2 | 3 MW (5X600KW) | Bare Gudde, **Mysore district**. | It is a single ridge with N-S orientation situated in Chamarajnagar State Forest and has a single peak and is held in the following Geographical co-ordinates:<br>**Latitude :** 11º44'0"-11º45'0" N<br>**Longitude :** 77º4'00"-77º5'20" E<br>**Ridge peaks :** 1222m Amsl. |

| | | | | |
|---|---|---|---|---|
| 5 | 57 H/7 | 22.8 MW (38X600KW) | Kainala Gudda Chunchinadoddi, Padadariododdi, Basavanhalli, Puttanakatte Betta Kadlahani Betta, Devara Betta, Kokkallu matte Kanchanakere Betta.<br><br>**Mysore & Bangalore district** | The proposed area consists of number of ridges which are mostly having NW-SE directions and are of non-contagious in nature. The proposed area is situated in the dense scrub and is described as dense mixed jungle mainly covered with Bamboos etc. The portion of the area has presence of boulders with open scrub features. Further, it has number of villages as stated under Column (4) and has number of peaks and is held in he following Geographical co-ordinates :<br>**Latitude :** 12º20'29"-12º24'11" N<br>**Longitude :** 77º15'00"-77º18'45" E<br>**Ridge peaks :** 1048, 1072, 1141, 1000, 1080, 1003, 968 and 1125 m Amsl. |
| 6 | 57 H/8 | 10.8 MW (18X600KW) | Chikkalattur, Kupal Gudda, Bagal Betta<br><br>**Mysore district** | The proposed area is having cluster of independent ridges with no proper orientation and are located in the Madesvara Malai Reserved Forest and is having dense mixed jungle status and is called as Bagal Betta. The area is surrounded by few villages as mentioned in Column (4) and has 4 peaks and are covered in the following geographical co-ordinates::<br>**Latitude :** 12º0'00"-12º2'50" N<br>**Longitude :** 77º26'35"-77º28'45" E<br>**Ridge peaks :** 805, 800, 665, 770 m Amsl. |

| | | | | |
|---|---|---|---|---|
| 7 | 57 H/8 | 21 MW (35X600KW) | Kanchikallu Betta, Holekovina Betta, Mam Betta.<br><br>**Mysore district** | The proposed area is in reversed "L" shape & has 3 ridges one of them is in Eastwest direction and is called MamBetta and other 2 are mostly in N-S direction and are called as Kanchikal Betta and Bandali Durga. The entire area is situated in Mam Betta R.F. Further; it has open mixed jungle with indication of sandalwood & Bamboo as per SOI and also has the presence of Boulders. The proposed area is located on the N-W of Bandahalli village. Further, the villages that area surrounded the area are listed up at Column (4) and are having several peaks. The total area is held in the following Geographical co-ordinates:<br><br>**Latitude :** 12º10'00"-12º14'15" N<br>**Longitude :** 77º16'00"-77º21'32" E<br>**Ridge peaks :** 1098, 1032, 1303, and 1033 m Amsl. |
| 8 | 48 N/7 | 8.4 MW | Gangayikoppa, Guladahalli, Maravalli, **Dharwad & Shimoga District** | A NW-SE oriented continuous ridge is located on the South of Guladahalli and is of dense scrub features. Further; the earmarked area spreads in two districts i.e. Shimoga and Dharwad and has varying elevation from 761m to 818m. And the area is held in he following Geographical co-ordinates:<br><br>**Latitude :** 14º17'58"-14º20'0" N<br>**Longitude :** 75º27'9"-75º30'0" E<br>**Ridge peaks :** 761,809,818 m Amsl. |

1. ಸದರಿ ಯೋಜನೆಯನ್ನು (financial closure) ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.

2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು

ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗಳಿಗನುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 400

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎ. ಶ್ರೀನಿವಾಸ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ ಸೊರಬ, ಶಿವಮೊಗ್ಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಒ(1)186/2009-10 ದಿನಾಂಕ: 27-01-2010.

2) ಡಾ: ಎ. ಶ್ರೀನಿವಾಸ, ವೈದ್ಯಾಧಿಕಾರಿ, ಇವರ ಮನವಿ ದಿನಾಂಕ: 04-02-2010.

**ಪ್ರಸ್ತಾವನೆ :**

ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಾ: ಎ. ಶ್ರೀನಿವಾಸ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರು ದಿನಾಂಕ: 20-02-2008 ರಂದು ಸೇವೆಗೆ ಸೇರಿ, ಸಾರ್ವಜನಿಕ ಆಸ್ಪತ್ರೆ, ಸೊರಬ, ಶಿವಮೊಗ್ಗ ಜಿಲ್ಲೆ ಕಾರ್ಯನಿರ್ವಹಿಸುತ್ತಿದ್ದು, ಅವರು 2008ನೇ ಸಾಲಿನಲ್ಲಿ ನಡೆದ ಕೇಂದ್ರ ಲೋಕಸೇವಾ ಆಯೋಗದಿಂದ ನಡೆಸಲಾದ ಅಖಿಲ ಭಾರತ ಸೇವೆಗಳ ಪರೀಕ್ಷೆಯಲ್ಲಿ ಐ.ಪಿ.ಎಸ್. ಹುದ್ದೆಗೆ ಆಯ್ಕೆಯಾಗಿದ್ದು, ತರಬೇತಿಗೆ ಹಾಜರಾಗಲು ಜನವರಿ 30 ಕೊನೆಯ ದಿನಾಂಕವಾಗಿರುವುದಾಗಿ ತಿಳಿಸುತ್ತಾ, ಸದರಿ ತರಬೇತಿಗೆ ಹಾಜರಾಗಲು ಅನುಕೂಲವಾಗುವಂತೆ ಅವರನ್ನು ಸೇವೆಯಿಂದ ವಿಮುಕ್ತಿಗೊಳಿಸಿ ರಾಜೀನಾಮೆ ಅಂಗೀಕರಿಸುವಂತೆ ಕೋರಿರುತ್ತಾರೆ.

ಡಾ: ಎ. ಶ್ರೀನಿವಾಸ್, ವೈದ್ಯಾಧಿಕಾರಿ ಇವರು ಮೇಲೆ ಓದಲಾದ (2)ರಲ್ಲಿನ ತಮ್ಮ ಮನವಿಯಲ್ಲಿ ಅವರು ಐ.ಪಿ.ಎಸ್. ತರಬೇತಿಗೆ ತೆರಳಬೇಕಾಗಿರುವ ಹಿನ್ನೆಲೆಯಲ್ಲಿ ದಿನಾಂಕ: 28-08-2009 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಡಾ: ಎ. ಶ್ರೀನಿವಾಸ್, ವೈದ್ಯಾಧಿಕಾರಿ, ಇವರು ಕೇಂದ್ರ ಲೋಕಸೇವಾ ಆಯೋಗದಿಂದ ನಡೆಸಲಾದ ಅಖಿಲ ಭಾರತ ಸಿವಿಲ್ ಸೇವೆಗಳ ಪರೀಕ್ಷೆಯಲ್ಲಿ ಐ.ಪಿ.ಎಸ್. ಪರೀಕ್ಷಾರ್ಥ ಅಭ್ಯರ್ಥಿಯಾಗಿ ಆಯ್ಕೆ ಹೊಂದಿದ್ದು ಸದರಿ ತರಬೇತಿಗೆ ಹಾಜರಾಗಲು ಅನುವಾಗುವಂತೆ ಅವರ ರಾಜೀನಾಮೆಯನ್ನು ದಿನಾಂಕ: 28-08-2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 81 ಹೆಚ್‌ಎಸ್‌ಹೆಚ್ 2010 ಬೆಂಗಳೂರು, ದಿನಾಂಕ: 05ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಎ. ಶ್ರೀನಿವಾಸ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸೊರಬ, ಶಿವಮೊಗ್ಗ ಜಿಲ್ಲೆ ಇವರು 2008ರಲ್ಲಿ ನಡೆದ ಕೇಂದ್ರ ಲೋಕಸೇವಾ ಆಯೋಗದಿಂದ ನಡೆಸಲಾದ ಅಖಿಲ ಭಾರತ ಸಿವಿಲ್ ಸೇವಾ ಪರೀಕ್ಷೆಯಲ್ಲಿ ಐ.ಪಿ.ಎಸ್. ಪರೀಕ್ಷಾರ್ಥ ಅಭ್ಯರ್ಥಿಯಾಗಿ ಆಯ್ಕೆ ಹೊಂದಿರುವ ಹಿನ್ನೆಲೆಯಲ್ಲಿ ಅವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ದಿನಾಂಕ: 28-08-2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 419

**(ಐ. ಹೇಮನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1)

## HEALTH & FAMILY WELFARE SECRETARIAT

Sub: Acceptance of resignation of Dr. A. Srinivas, General Duty Medical Officer, Primary Health Centre, Soraba, Shimoga District.

Read: 1) Letter No. JRO(1)186/09-10 dated: 27-01-2007 from the Commissioner, Health & Family Welfare Services, Bangalore.

2) Representation dated: 04-02-2010 of Dr. A Srinivas, Medical Officer.

Preamble:

The Commissioner, Health & Family Welfare Services, Bangalore vide his letter at (1) above has stated that Dr. A. Srinivas General Duty Medical Officer, working in Primary Health Centre Soraba,

Shimoga District has been selected as I.P.S. Probationer as he had to undergo training in this regard from 28-08-2009 at Sardar Vallabhbhai Patel National Police Academy, Hydrabad. Accordingly, he has tendered resignation to the post of General Duty Medical Officer in the Health & Family Welfare Department with a request to accept the same with effect from 28-08-2009 vide letter read at (2) above.

It is also, reported that there are no dues from him to the Government and also no departmental enquiry is pending. Hence, the Commissioner for Health & Family Welfare Services has recommended that Dr: A. Srinivas's resignation may be accepted with effect from 28-08-2009.

The proposal has been examined and hence the following order.

**GOVERNMENT ORDER NO.: HFW 81 HSH 2010 BANGALORE, DATED: 05-02-2010.**

In view of the circumstances explained in the preamble, the resignation tendered by Dr: A. Srinivas, General Duty Medical Officer, Primary Health Centre, Soraba, Shimoga District is hereby accepted with effect from 28-08-2009 retrospectively since he has selected as I.P.S. Probationer (2009).

By Order and in the name of the Governor of Karnataka

**(I. HEMANATH)**
Under Secretary to Government
Health & Family Welfare Department (Services-I)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ.: ಕಂದಾಯ/ಸಿಬ್ಬಂದಿ/2/2004–05, ದಿನಾಂಕ: 18–02–2005.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಗಮದ ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ.: ಕರೇಮಾಮ/ಆಡಳಿತ/ವಾ/2007–08/814, ದಿನಾಂಕ: 16–08–2007.
3. ಸರ್ಕಾರದ ಆದೇಶ ಸಂ.: ಆರ್‌ಡಿ 230 ಎಎಸ್‌ಡಿ 2007, 17–09–2008, 24–12–2008.
4. ಮಹಾಲೇಖಪಾಲರು, ಬೆಂಗಳೂರು ಇವರ ಪತ್ರ **ಸಂ.: GE-1/R-3/Vol-529/631,** Dt: 27-08-2009.

**ಪ್ರಸ್ತಾವನೆ :**

ಮೇಲೆ (1) ಮತ್ತು (2)ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ, ಬೆಂಗಳೂರು ಇವರ ಪ್ರಸ್ತಾವನೆಗಳಲ್ಲಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರ ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ)ರಲ್ಲಿ ದಿನಾಂಕ: 01–12–2001 ರಿಂದ ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ: 01–12–2002ರಿಂದ ಅನ್ವಯವಾಗುವಂತೆ 5 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ, ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಒಟ್ಟು 5ನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಮಹಾಲೇಖಪಾಲರು ತಮ್ಮ ಪತ್ರದಲ್ಲಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್ ಇವರ ವೇತನವನ್ನು ಪುನರ್ ನಿಗದಿಗೊಳಿಸಿದ್ದರಿಂದ ದಿನಾಂಕ 01–12–2006 ರಿಂದ ವೇತನ ಶ್ರೇಣಿ ರೂ. 14,050–25,050 ರಿಂದ ಗರಿಷ್ಠ ಹಂತ ತಲುಪಿರುವುದಾಗಿ ಹಾಗೂ ಸದರಿ ವೇತನ ಶ್ರೇಣಿಯಲ್ಲಿ ದಿನಾಂಕ: 01–12–2007 ರಿಂದ ಅನ್ವಯವಾಗುವಂತೆ ಪರಿಷ್ಕೃತ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ.

ಸರ್ಕಾರವು ಮಹಾಲೇಖಪಾಲರು ಕರ್ನಾಟಕ, ಬೆಂಗಳೂರು ಇವರ ದಿನಾಂಕ: 27–08–2009ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರಿಗೆ ವೇತನ ಶ್ರೇಣಿ ರೂ. 14,050–25,050ರಲ್ಲಿ ದಿನಾಂಕ: 01–12–2007ರಿಂದ ಅನ್ವಯವಾಗುವಂತೆ ಪರಿಷ್ಕೃತ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 629 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್ ಇವರಿಗೆ ವೇತನ ಶ್ರೇಣಿ ರೂ. 14,050–25,050ರಲ್ಲಿ ದಿನಾಂಕ: 01–12–2007 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 420

**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್.ಎನ್. ವಡಗೇರಿ, ಹಿಂದಿನ ತಹಶೀಲ್ದಾರ್, ಚಿತ್ತಾಪುರ (ಪ್ರಸ್ತುತ ತಹಶೀಲ್ದಾರ್, ಗುಲ್ಬರ್ಗಾ) ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರ ಪತ್ರ ಸಂ.: ELN/GEN/81/2007-08 ದಿನಾಂಕ 19–09–2008 ಮತ್ತು 04–06–2009.
2. ಕಾರಣ ಕೇಳುವ ನೋಟೀಸ್ ಸಂ.: ಆರ್‌ಡಿ 53 ಎಡಿಇ 2008, ದಿನಾಂಕ: 07–09–2009.
3. ಶ್ರೀ ಆರ್.ಎನ್. ವಡಗೇರಿ, ತಹಶೀಲ್ದಾರ್, ಚಿತ್ತಾಪುರ ಇವರ ಮನವಿ ದಿನಾಂಕ: 02–11–2009.

**ಪ್ರಸ್ತಾವನೆ :**

ಶ್ರೀ ಆರ್.ಎನ್. ವಡಗೇರಿ, ಹಿಂದಿನ ತಹಶೀಲ್ದಾರ್, ಚಿತ್ತಾಪುರ (ಪ್ರಸ್ತುತ ತಹಶೀಲ್ದಾರ್, ಗುಲ್ಬರ್ಗಾ) ಇವರು ಚಿತ್ತಾಪುರ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಸಹಾಯಕ ಮತದಾರರ ನೊಂದಣಾಧಿಕಾರಿಗಳು 40 ಚಿತ್ತಾಪುರ (ಪರಿಶಿಷ್ಟ ಜಾತಿ) ವಿಧಾನಸಭಾ ಕ್ಷೇತ್ರ, ಇವರು ಕಳೆದ ವರ್ಷ ಏಪ್ರಿಲ್, ಮೇ 2009 ಕರ್ನಾಟಕ ವಿಧಾನ ಸಭಾ ಸಾರ್ವತ್ರಿಕ ಚುನಾವಣೆ ಸಮಯದಲ್ಲಿ ಮತದಾರರ ಪಟ್ಟಿಯಿಂದ ಹೆಸರು ತೆಗೆಯಲ್ಪಟ್ಟ ಸುಮಾರು 100 ಕ್ಕಿಂತ ಹೆಚ್ಚು ಮತದಾರರು ದಿನಾಂಕ: 28–05–2008ರಂದು ನಡೆದ ಚುನಾವಣೆಯಲ್ಲಿ ಮತ ಚಲಾಯಿಸಿರುತ್ತಾರೆ. ಈ ಘಟನೆಯಿಂದ ಚುನಾವಣಾ ಆಯೋಗವು ಈ ಮತಗಟ್ಟೆಯಲ್ಲಿ ಮರು ಮತದಾನ ನಡೆಸಲು ಆದೇಶ ನೀಡಲಾಗಿತ್ತು. ಈ ಮರುಮತದಾನದಿಂದ ಸರ್ಕಾರದ ಸಮಯ ಹಾಗೂ ಹಣವನ್ನು ಖರ್ಚು ಮಾಡಲು ಅನುವು ಮಾಡಿಕೊಟ್ಟಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4 ರವರೆಗೆ) ಸರ್ಕಾರಕ್ಕೆ ಪ್ರಸ್ತಾವನೆ ತಯಾರಿಸಿ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ಆರೋಪ ಪಟ್ಟಿಗಳೊಂದಿಗೆ ಕಾರಣ ಕೇಳುವ ನೋಟೀಸನ್ನು ಆರೋಪಿತ ಅಧಿಕಾರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 07–09–2009ರ ನೋಟೀಸ್ ನೀಡಲಾಗಿತ್ತು. ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಆರ್.ಎನ್. ವಡಗೇರಿ, ತಹಶೀಲ್ದಾರ್ ಇವರು ತಮ್ಮ ವಿರುದ್ಧ ಮಾಡಲಾದ ಆರೋಪವನ್ನು ಅಲ್ಲಗೆಳೆದಿರುತ್ತಾರೆ ಹಾಗೂ ತಮ್ಮ ವಿರುದ್ಧ ಮಾಡಲಾದ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ, ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 53 ಎಡಿಇ 2008, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಆರ್.ಎನ್. ವಡಗೇರಿ, ತಹಶೀಲ್ದಾರ್ (ಪ್ರಸ್ತುತ ತಹಶೀಲ್ದಾರ್, ಗುಲ್ಬರ್ಗಾ) ಇವರ ವಿರುದ್ಧ ಆರೋಪಗಳ ಬಗ್ಗೆ ಇಲಾಖಾ

ವಿಚಾರಣೆ ಜರುಗಿಸಲು ಶ್ರೀ ಡಿ.ವಿ. ಶೇಟ್, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿತ್ತಾಪುರ ತಹಶೀಲ್ದಾರ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರ್ತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗು ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು ಗುಲ್ಬರ್ಗಾ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ.: ಸಿಆಸುಇ 22 ಸೇಇವಿ 2007, ದಿನಾಂಕ: 11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 421

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 72 ಎಲ್‌ಆರ್‌ಎಂ 2009 ಬೆಂಗಳೂರು, ದಿನಾಂಕ: 03–02–2010

ಶ್ರೀ ದಾನಮ್ಮದೇವಿ ಸಮಾಜ ಸೇವಾ ಸಮಿತಿ (ರಿ), ಸಾವಳಗಿ, ತಾಲ್ಲೂಕು ಜಮಖಂಡಿ ಬಾಗಲಕೋಟೆ ಜಿಲ್ಲೆ, ಇವರು ಬಾಗಲಕೋಟೆ ಜಿಲ್ಲೆ, ಸಾವಳಗಿ ಗ್ರಾಮದ ಸ.ನಂ. 102/1/1 ಕ್ಷೇತ್ರ 2 ಎಕರೆ 8 ಗುಂಟೆ ಜಮೀನನ್ನು ಧಾರ್ಮಿಕ ಉದ್ದೇಶಕ್ಕಾಗಿ ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಇವರ ಪತ್ರ ಸಂಖ್ಯೆ: ಕೆಎಲ್‌ಆರ್/ಸಿಆರ್–5/2009–10 ದಿನಾಂಕ: 16–07–2009ರಲ್ಲಿ ಪ್ರಸ್ತಾಪಿತ ಮೇಲ್ಕಂಡ 2 ಎಕರೆ 8 ಗುಂಟೆ ಜಮೀನನ್ನು ಖರೀದಿ ಪಡೆಯಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರಡಿ ಅನುಮೋದನೆ/ವಿನಾಯಿತಿ ನೀಡುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ಮಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಶ್ರೀ ದಾನಮ್ಮದೇವಿ ಸಮಾಜ ಸೇವಾ ಸಮಿತಿ (ರಿ). ಸಾವಳಗಿ, ತಾಲ್ಲೂಕು ಜಮಖಂಡಿ, ಬಾಗಲಕೋಟೆ ಜಿಲ್ಲೆ, ಇವರು ಬಾಗಲಕೋಟೆ ಜಿಲ್ಲೆ, ಸಾವಳಗಿ ಗ್ರಾಮದ ಸ.ನಂ. 102/1/1 ಕ್ಷೇತ್ರ 2 ಎಕರೆ 8 ಗುಂಟೆ ಜಮೀನನ್ನು ಧಾರ್ಮಿಕ ಉದ್ದೇಶಕ್ಕಾಗಿ ಖರೀದಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 422

**(ಟಿ.ಎನ್. ನಾರಾಯಣ ಗೌಡ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

## ಕಂದಾಯ ಸಚಿವಾಲಯ

## ಅಧಿಸೂಚನೆ

ಸಂಖ್ಯೆ: ಕಂಇ 90 ಎಲ್ಆರ್ಎಂ 2009 ಬೆಂಗಳೂರು, ದಿನಾಂಕ: 02–02–2010

ಧರ್ಮಜ್ಯೋತಿ ಚಾರಿಟಬಲ್ ಸೊಸೈಟಿ, ವಾಮಂಜೂರ, ಮಂಗಳೂರು, ಇವರು ಬೀದರ್ ಜಿಲ್ಲೆ, ಔರಾದ್(ಬಿ) ತಾಲ್ಲೂಕಿನ ಉಜನಿ ಗ್ರಾಮದ ಸ.ನಂ. 106ರ ವಿಸ್ತೀರ್ಣದಲ್ಲಿ 3 ಎಕರೆ ಜಮೀನನ್ನು ಖರೀದಿಸಿದ್ದು ಈ ಬಗ್ಗೆ ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬೀದರ್ ಜಿಲ್ಲೆ, ಹಾವೇರಿ, ಇವರ ಪತ್ರ ಸಂಖ್ಯೆ: ಕಂ/ಭೂಸು/ಸಿಆರ್–4/2009–10/7491 ದಿನಾಂಕ: 14–08–2009 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ (ತಿದ್ದುಪಡಿ) 2005ರ ಕಲಂ 109 (1)(ಎ) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಧರ್ಮಜ್ಯೋತಿ ಚಾರಿಟಬಲ್ ಸೊಸೈಟಿ, ವಾಮಂಜೂರ, ಮಂಗಳೂರು, ಇವರು ಬೀದರ್ ಜಿಲ್ಲೆ, ಔರಾದ್(ಬಿ) ತಾಲ್ಲೂಕಿನ ಉಜನಿ ಗ್ರಾಮದ ಸ.ನಂ. 106ರ ವಿಸ್ತೀರ್ಣದಲ್ಲಿ 3 ಎಕರೆ ಜಮೀನನ್ನು ಶೈಕ್ಷಣಿಕ ನಿರ್ಮಾಣ ಉದ್ದೇಶಕಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಕೇಂದ್ರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋತಿಸತಕ್ಕದ್ದು.

5. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

6. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

7. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

8. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳದ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

9. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿತ್ತಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 423

**(ಟಿ.ಎನ್. ನಾರಾಯಣ ಗೌಡ)**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**PERSONNEL AND ADMINISTRATIVE REFORMS SECRETARIAT**

**ADDENDUM**

No. DPAR 54 SGO 2010 Bangalore, dated: 04-02-2010.

In the G.O. No. DPAR 330 SA AA SE 2007, dated: 16-04-2009, Terms and Conditions of Deputation of Smt. Anitha Balakrishna, IA&AS, Controller (Accounts Management). Finance Department, after Serial No. 11 the following shall be inserted.

**12. Children Education Allowance:** She is entilled for grant of Children Educational Allowance subject to the same ceilling limits and the same conditions as stipulated in Government of India O.M. No. 12011/03/2008-Estt. (Allowance) dated. 02-09-2008 and also the guidelines issued from time to time in that regard and as may be amended from time to time with immediate effect and no arrears shall be paid for any period earlier to the date of this order.

By Order and in the name of Governor of Karnataka

**(M.S. SHIVARAM)**
Under Secretary to Government
Department of Personnel and Administrative
Reforms (Services-3)

PR 424

**ಇಂಧನ ಸಚಿವಾಲಯ**

**ವಿಷಯ :** **M/s Future Energy** ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ** : 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ಎಫ್‌ಇ/2009/926 ದಿನಾಂಕ: 18/21–02–2009.

**2.** ದಿನಾಂಕ: 23.10. 2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Future Energy ಇವರಿಗೆ ಬಿಜಾಪುರ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Future Energy ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಧಾರವಾಡ ಜಿಲ್ಲೆಯಲ್ಲಿ ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 80 ಇನ್‌ಸಿಇ 2009, ಬೆಂಗಳೂರು, ದಿನಾಂಕ: 08–02–2010.**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s Future Energy ಇವರಿಗೆ ಬಿಜಾಪುರ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:–

| Topo sheet No. | Proposed capacity in MW | Near by villages of the proposed area and district | Geographical area description of the project |
|---|---|---|---|
| 47 P/14 | 5.00 MW | Kalagurki, Bijapur District. | The identified area bisects by railway track and is ground level plain area. Located in the North of Kalagurki village. The proposed area is |

| | | | |
|---|---|---|---|
| | | | covered in the following Geographical Co-ordinates:<br>**Part-A**<br>Latitude: 16⁰34'34"-16⁰36'9" N<br>Longitude: 75⁰45'0"-75⁰46'24" E<br>Ridge peakes: Nil<br>**Part-B**<br>Latitude:16⁰37'29"-16⁰38'25" N<br>Longitude: 75⁰47'48"-75⁰48'23" E<br>Ridge peaks: Nil |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದ್ದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಯುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ. ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ದ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಿಕೆ ಮಾಡಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. The Company shall note that there is restriction for using 250 KW WTG's

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 425

**(ಎಸ್.ಜಿ. ಸಂಪತ್‌ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## COMMERCE & INDUSTRIES SECRETARIAT

**Sub :-** Approval to the Project Proposal of M/s Saj Food Products Pvt. Ltd., to setup Biscuits, Cookies, Cakes, Rusks and Extruded Snacks manufacturing facility.

**Read :-** Proceedings of the 20th State High Level Clearance Committee (SHLCC) meeting held on 05-01-2010.

**Preamble:**

M/s Saj Food Products Pvt. Ltd., proposes to establish Biscuits, Cookies, Cakes, Rusks and Extruded Snacks manufacturing facility at Gejjalegere Industrial Area, Maddur Taluk, Mandya District, subject to availability or Alternate land at KIADB Industrial Area, Harohalli/Mysore with an investment of Rs. 92.42 crores, generating employment to about 1025 persons.

In the 20th State High Level Clearance Committee (SHLCC) held on 05-01-2010 the proposal of Company has been approved.

Government has examined the recommendations made by the State High Level Clearance Committee in the 20th Meeting held on 05-01-2010 in all aspects.

Hence the following order.

**Government Order No. CI 40 SPI 2010 Bangalore, dated : 17-02-2010**

Government is pleased to accord in principle approval for the project proposal M/s Saj Food Products Pvt. Ltd., to establish Biscuits, Cookies, Cakes, Rusks and Extrded Snacks manufacturing facility at Gejjalegare Industrial Area, Maddur Taluk, Mandya District, subject to availability or Alternate land at KIADB Industrial Area, Harohalli/Mysore with an investment of Rs. 92.42 crores, generating

employment to about 1025 persons and extend the following infrastructure facilities, incentives and concessions.

**Infrastructure Facilities:-**

1. **Land:** 8 acres – KIADB land
2. **Power :** 1500 KVA from CESCOM
3. **Water:** 0.25 MLD from KIADB
4. **Incentives and Concessions:** As applicable under Industrial Policy of the State.

**General Terms and conditions** :

1. **MOU:** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment:** The Company shall prepare a plan for development of Human Resources required for the project, train local people and provide employment to these trained local youth and comply with Government policy of Employment to local people i.e., Dr. Sarojini Mahishi report. A copy of Human Resources Development plan shall be sent to the Commissioner for ID. & Director of Industries and Commerce for monitoring.
4. **Vendor Development:** where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others:**

   a) The project proponents shall provide employment to atleast one member of the family of each land looser as the land is being acquired through KIADB.

   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

   This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

P.R. 472

Desk Officer (Technical cell)

Commerce and Industries Department

periods.The pemission is also accorded for sub-leasing of lands. The sub-lease period shall be the balance lease period of the original allotment to JSWSL/Bhuwalka Pipes (P) Ltd., as the case may be.

By Order and in the name of the Governor of Karnataka,

PR. 527

**(APARNA PAVATE)**

Desk Officer (Technical Cell)
Commerce & Industries Department.

**ಜಲ ಸಂಪನ್ಮೂಲ ಸಚಿವಾಲಯ**

ವಿಷಯ: ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕಿನಲ್ಲಿ ಸಣ್ಣ ನೀರಾವರಿ ಉಪವಿಭಾಗ ಕಛೇರಿಯನ್ನು ಪ್ರಾರಂಭಿಸುವ ಬಗ್ಗೆ-ಆದೇಶ

ಓದಲಾಗಿದೆ : (1) ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂ: ಮುಸದ/ಸಿಶಾ-2/ಸಿ-2/ಉ.ವಿ.ಸೃ/2009-10/2297 ದಿನಾಂಕ: 07.09/2009.
(2) ಸರ್ಕಾರದ ಆದೇಶ ಸಂಖ್ಯೆ: ಜಸಂಇ 129 ಸೇಎಸು 2009 ದಿನಾಂಕ:08/12/2009

**ಪ್ರಸ್ತಾವನೆ:**

ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 07/09/2009ರ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನಲ್ಲಿ 12 ಸಣ್ಣ ನೀರಾವರಿ ಕೆರೆಗಳಿದ್ದು ಇವುಗಳ ಅಚ್ಚುಕಟ್ಟು 1912 ಹೆಕ್ಟೇರುಗಳು ಇರುತ್ತವೆ. ಈ ತಾಲ್ಲೂಕಿನಲ್ಲಿ 6 ಏತ ನೀರಾವರಿ ಯೋಜನೆಗಳಿದ್ದು, ಇದರ ಅಚ್ಚುಕಟ್ಟು 780 ಹೆಕ್ಟೇರು ಇರುತ್ತದೆ. ಇದಲ್ಲದೆ 2 ಇಂಗು ಕೆರೆಗಳು ಮತ್ತು 5 ಚೆಕ್ ಡ್ಯಾಂಗಳಿದ್ದು, ಇವುಗಳಿಂದ ಪರೋಕ್ಷವಾಗಿ 466 ಹೆಕ್ಟೇರು ಅಚ್ಚುಕಟ್ಟು ಸೃಜಿಸಲಾಗಿದೆ. 12 ಸಣ್ಣ ನೀರಾವರಿ ಕೆರೆಗಳ ಪೈಕಿ ಸವಳಂಗ ಹೊಸಕೆರೆ ಅಡಿಯಲ್ಲಿ ಸುಮಾರು 800 ಹೆಕ್ಟೇರು ಅಚ್ಚುಕಟ್ಟು ಇದ್ದು, ಇದರ ನಿರ್ವಹಣೆ ಮುಖ್ಯವಾಗಿದ್ದು ಹೊನ್ನಾಳಿ ತಾಲ್ಲೂಕಿನಲ್ಲಿ ಮುಂದುವರೆದ ಹಾಗೂ ಪ್ರಗತಿಯಲ್ಲಿರುವ ಕಾಮಗಾರಿಗಳ ಹಾಗೂ 2009-10 ನೇ ಸಾಲಿನಲ್ಲಿ ಉದ್ದೇಶಿಸಿರುವ ಹೊಸಕಾಮಗಾರಿಗಳಿದ್ದು ಸಣ್ಣ ನೀರಾವರಿ ಕಾಮಗಾರಿಗಳ ಸುಗಮ ನಿರ್ವಹಣೆ ಹಾಗೂ ಕೆಲಸಗಳು ತ್ವರಿತವಾಗಿ ಪರಿಣಾಮಕಾರಿಯಾಗಲು ಅನುಕೂಲವಾಗುವಂತೆ ಹೊನ್ನಾಳಿ ತಾಲ್ಲೂಕಿನಲ್ಲಿ ಒಂದು ಸಣ್ಣ ನೀರಾವರಿ ಉಪ ವಿಭಾಗವನ್ನು ಸೃಜಿಸಲು/ಸ್ಥಳಾಂತರಿಸಲು ಕೋರಿರುತ್ತಾರೆ.

ಹೊನ್ನಾಳಿ ತಾಲ್ಲೂಕನ್ನು ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡು ಸಣ್ಣ ನೀರಾವರಿ ಉಪ ವಿಭಾಗ ಕಛೇರಿಯನ್ನು ಪ್ರಾರಂಭಿಸುವ ಸಲುವಾಗಿ ಜಲಸಂಪನ್ಮೂಲ ಇಲಾಖೆಯಲ್ಲಿ ನಿಷ್ಕ್ರಿಯಗೊಂಡಿರುವ ಯಾವುದಾದರೂ ಉಪ ವಿಭಾಗವನ್ನು ಪುನಃಶ್ಚೇತನಗೊಳಿಸಿ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ನೀಡುವಂತೆ ಜಲಸಂಪನ್ಮೂಲ ಇಲಾಖೆಯನ್ನು ಕೋರಲಾಗಿತ್ತು.

ಜಲಸಂಪನ್ಮೂಲ ಇಲಾಖೆಯು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಹಿತದೃಷ್ಟಿಯಿಂದ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕಿನಲ್ಲಿ ಸಣ್ಣ ನೀರಾವರಿ ಉಪ ವಿಭಾಗವನ್ನು ತೆರೆಯಲು ಬೃಹತ್ ನೀರಾವರಿ ಇಲಾಖೆಯಲ್ಲಿ ಮುಖ್ಯ ಇಂಜಿನೀಯರ್, ನೀರಾವರಿ (ದಕ್ಷಿಣ) ವಲಯ, ಮೈಸೂರು ವ್ಯಾಪ್ತಿಯಲ್ಲಿ ನಿಷ್ಕ್ರಿಯಗೊಳಿಸಿರುವ ಸಿ. ಆರ್ ಉಪವಿಭಾಗ, ರಂಗಸಮುದ್ರ ಕಛೇರಿಯನ್ನು ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ವಹಿಸಿರುತ್ತದೆ. ಸದರಿ ಉಪವಿಭಾಗದ ವೃಂದ ಬಲದೊಂದಿಗೆ ಹೊನ್ನಾಳಿಯಲ್ಲಿ ಸಣ್ಣ ನೀರಾವರಿ ಉಪವಿಭಾಗ ಕಛೇರಿಯನ್ನು ತೆರೆಯಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 135 ಸೇಸಎ2009 ಬೆಂಗಳೂರು, ದಿನಾಂಕ: 16/01/2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲಸಂಪನ್ಮೂಲ ಇಲಾಖೆಯಿಂದ ವರ್ಗಾಯಿಸಲಾದ ಸಿ.ಆರ್ ಉಪ ವಿಭಾಗ, ರಂಗಸಮುದ್ರ ಕಛೇರಿಯನ್ನು ಹಾಗೂ ಅದಕ್ಕೆ ಮಂಜೂರಾದ ಪೂರಕ ವೃಂದ ಬಲದ ಹುದ್ದೆಗಳೊಂದಿಗೆ ಸ್ಥಳಾಂತರಿಸುವ ಮೂಲಕ ಕೂಡಲೇ ಜಾರಿಗೆ ಬರುವಂತೆ ದಾವಣಗೆರೆ ಜಿಲ್ಲೆ ಹೊನ್ನಾಳಿಯಲ್ಲಿ ಸಣ್ಣ ನೀರಾವರಿ ಉಪ ವಿಭಾಗ ಕಛೇರಿಯನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಹೊನ್ನಾಳಿಯಲ್ಲಿ ಹೊಸದಾಗಿ ತೆರೆಯಲ್ಪಡುವ ಸಣ್ಣ ನೀರಾವರಿ ಉಪ ವಿಭಾಗದ ಪೂರಕ ವೃಂದ ಬಲದ ವಿವರಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ.

ಹೊಸದಾಗಿ ಪ್ರಾರಂಭಿಸಲಾಗುವ ಹೊನ್ನಾಳಿ ಸಣ್ಣ ನೀರಾವರಿ ಉಪ ವಿಭಾಗದ ಕಾರ್ಯ ವ್ಯಾಪ್ತಿ, ಕಛೇರಿ/ಪೀಠೋಪಕರಣ ವ್ಯವಸ್ಥೆ, ಸಿಬ್ಬಂದಿ ಭರ್ತಿ ಇತ್ಯಾದಿಗಳ ಬಗ್ಗೆ ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಕ್ರಮ ಜರುಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಅನುಬಂಧ–1**

**ಸರ್ಕಾರದ ಆದೇಶ ಸಂಖ್ಯೆ: ಸನೀಇ 135 ಸೇಸಎ 2009 ದಿನಾಂಕ:16/01/2010**

ಹೊನ್ನಾಳಿಯಲ್ಲಿ ಹೊಸದಾಗಿ ಪ್ರಾರಂಭಿಸಲ್ಪಡುವ ಸಣ್ಣ ನೀರಾವರಿ ಉಪ ವಿಭಾಗದ ಸಿಬ್ಬಂದಿಗಳ ವಿವರ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನೀಯರ್ | 1 |
| 2 | ಸಹಾಯಕ ಇಂಜಿನೀಯರ್ | 4 |
| 3 | ಕಿರಿಯ ಇಂಜಿನೀಯರ್ | 4 |
| 4 | ಡ್ರಾಫ್ಟ್‌ಮೆನ್ | 1 |
| 5 | ಪ್ರಥಮ ದರ್ಜೆ ಸಹಾಯಕರು | 1 |
| 6 | ದ್ವಿತೀಯ ದರ್ಜೆ ಸಹಾಯಕರು | 2 |
| 7 | ಬೆರಳಚ್ಚುಗಾರರು | 1 |
| 8 | ಜವಾನರು | 2 |
| 9 | ಕಾವಲುಗಾರರು | 1 |
| | **ಒಟ್ಟು** | **17** |

ಪಿ.ಆರ್. 528

**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

ವಿಷಯ : ಗುಲ್ಬರ್ಗಾ ಜಿಲ್ಲೆ, ಯಾದಗಿರ್ ತಾಲ್ಲೂಕು ದುಪ್ಪಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

ಓದಲಾಗಿದೆ : ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04/02/09ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/2008–09/701.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನೀಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಯಾದಗಿರ್ ತಾಲ್ಲೂಕು ದುಪ್ಪಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದುಪ್ಪಳ್ಳಿ ಮತ್ತು ಬದ್ದೇಪಲ್ಲಿ ಗ್ರಾಮಗಳ ಜಮೀನುಗಳಿಗೆ ಯಾದಗಿರ್ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿನ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 3,42,707–00 ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 13/11/1997.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 28/08/1999.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಭೂ. ಸ್ವಾ. ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರ ಧನಕ್ಕಾಗಿ ಯಾದಗಿರ್ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಂಖ್ಯೆ: 8/01, 11/01, 12/01 ಮತ್ತು 13/01ನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಎಲ್.ಎ.ಸಿ. ಸಂಖ್ಯೆ: 12/01 ಮತ್ತು 13/01ರಲ್ಲಿ ಸಾಮಾನ್ಯ ತೀರ್ಪು ಹಾಗೂ ಇತರೆ ಪ್ರಕರಣಗಳಲ್ಲಿ ಪ್ರತ್ಯೇಕ ತೀರ್ಪುಗಳನ್ನು ನ್ಯಾಯಾಲಯವು ನೀಡಿದೆ. ಎಲ್.ಎ.ಸಿ. ಸಂಖ್ಯೆ: 8/01ರಲ್ಲಿ ಪ್ರತಿ ಎಕರೆಗೆ ರೂ.32,000/–ಗಳಂತೆ (ಖುಷ್ಕಿ ಜಮೀನಿಗೆ) ಎಲ್.ಎ.ಸಿ. ಸಂಖ್ಯೆ: 11/01ರಲ್ಲಿ ರೂ.33,300/– ಗಳಂತೆ ಎಲ್.ಎ.ಸಿ. ಸಂಖ್ಯೆ: 12/01 ಮತ್ತು 13/01 ರಲ್ಲಿ ರೂ.29.000/– ಗಳಂತೆ ಬೆಲೆ ನಿಗದಿಪಡಿಸಿದೆ. ಅಲ್ಲದೆ, ಹೆಚ್ಚಿಸಿದ ಪರಿಹಾರ ಮೊತ್ತದ ಮೇಲೆ ಶೇ.30ರಷ್ಟು ಸೋಲೇಷಿಯಂ, ಶೇ.12 ರಷ್ಟು ಮಾರುಕಟ್ಟೆ ದರವನ್ನು 4(1)ರ ಅಧಿಸೂಚನೆ ದಿನಾಂಕದಿಂದ ಐತೀರ್ಪಿನ ದಿನಾಂಕದವರೆಗೆ ಮತ್ತು ಬಡ್ಡಿಯನ್ನು ಜಮೀನನ್ನು ಕಬ್ಜೆ ಪಡೆದ ದಿನಾಂಕದಿಂದ ಮೊದಲನೆ ವರ್ಷಕ್ಕೆ ಶೇ.9ರಂತೆ ತದನಂತರದ ಅವಧಿಗೆ ಶೇ.15ರಂತೆ ಪಾವತಿಸಲು ತೀರ್ಪು ನೀಡಿದೆ. ಮೇಲ್ಕಂಡ 4 ಪ್ರಕರಣಗಳಲ್ಲಿ ಎಲ್.ಎ.ಸಿ. ಸಂಖ್ಯೆ: 12/01 ಮತ್ತು

13/01ರ ತೀರ್ಪಿನ ವಿರುದ್ಧ ಜಿಲ್ಲಾ ನ್ಯಾಯಾಲಯದಲ್ಲಿ ಎಲ್.ಎ.ಸಿ.ಎ. 55/07 ಮತ್ತು 56/07 ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಇದರಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ 14/04/08 ರಂದು ತೀರ್ಪು ನೀಡಿದೆ. ಈ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ತೀರ್ಮಾನಿಸಿದೆ. ಉಳಿದಂತೆ ಎಲ್.ಎ.ಸಿ. ಸಂಖ್ಯೆ:8/01ರ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರುವ ನಿರ್ಧಾರವನ್ನು ಕಂದಾಯ ಇಲಾಖೆಯು ಕೈಗೊಂಡಿದೆ.

ಮೇಲಿನ ಎಲ್ಲಾ ಪ್ರಕರಣಗಳು ಒಂದೇ ಅಧಿಸೂಚನೆ ಹಾಗೂ ಐತೀರ್ಪಿನಲ್ಲಿ ಸೇರಿರುವುದರಿಂದ, ಎಲ್.ಎ.ಸಿ. ಸಂಖ್ಯೆ:11/01 ಸಹ ಸೇರಿದಂತೆ 4 ಪ್ರಕರಣಗಳಿಗೆ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ಸರ್ಕಾರವು ನಿರ್ಧರಿಸಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ | ಎಲ್ಎಸಿಎ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 8/01 | – | 320/2 ದುಪ್ಪಳ್ಳಿ | 2–00 | 111343 |
| 2 | 11/01 | – | 315/2 ಬದ್ದೇಪಲ್ಲಿ | 0–10 | 7868 |
| 3 | 12/01 | 55/07 | 344/4,5,6,7 ಬದ್ದೇಪಲ್ಲಿ | 2–27 | 129496 |
| 4 | 13/01 | 56/07 | 333/2 ಬದ್ದೇಪಲ್ಲಿ | 1–38 | 94000 |
| | **ಒಟ್ಟು** | | | | **342707** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 30 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ದುಪ್ಪಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ದುಪ್ಪಳ್ಳಿ ಮತ್ತು ಬದ್ದೇಪಲ್ಲಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾ ಹಾಕಿದ ಪರಿಹಾರ ಧನದ ಮೊತ್ತ ರೂ.3,42,707–00ಗಳನ್ನು (ಮೂರು ಲಕ್ಷದ ನಲವತ್ತೆರಡು ಸಾವಿರದ ಏಳುನೂರ ಏಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00– ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1ಟಿಎಫ್ ಡಿ 1 ಟಿಎಫ್ ಪಿ 2008 ದಿನಾಂಕ 16/09/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ),**

ಪಿ.ಆರ್. 529 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಧುತ್ತರಗಾಂವ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಧುತ್ತರಗಾಂವ್ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ದಿನಾಂಕ 07/11/09 ರ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾ ಪ್ರ/2009–10/6635.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನೀಯರ್,ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಧುತ್ತರಗಾಂವ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಧುತ್ತರಗಾಂವ್ ಗ್ರಾಮದ ಜಮೀನುಗಳಿಗೆ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 25/12/79
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 14/02/83

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18 (1) ರಡಿ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆಗೆ ರೂ.8,000/– ಗಳಿಗೆ ಪರಿಹಾರ ಧನವನ್ನು ಹೆಚ್ಚಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ತೀರ್ಪು ನೀಡಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಎಂ.ಎಫ್.ಎ ಸಂಖ್ಯೆ: 9488/05 ನ್ನು ದಾಖಲಿಸಿದ್ದು, ಪ್ರತಿ ಎಕರೆಗೆ ರೂ.14,880/–ಗಳಿಗೆ ಪರಿಹಾರ ಧನವನ್ನು ಹೆಚ್ಚಿಸಿ ಭೂಮಾಲೀಕರಿಗೆ ಪಾವತಿಸುವಂತೆ ಆದೇಶಿಸಿದೆ. ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಧುತ್ತರಗಾಂವ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 1027/97 | 9448/05 | 73 | 6–26 | 3,39,381–00 |

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 289 ಎಲ್ ಎಸ್ ಪಿ 2007, ದಿನಾಂಕ 08/03/2007 ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 169 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಧುತ್ತರಗಾಂವ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಧುತ್ತರಗಾಂವ್ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 1027/97 ರಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 3,39,381–00 ಗಳನ್ನು (ಮೂರು ಲಕ್ಷದ ಮೂವತ್ತೊಂಬತ್ತು ಸಾವಿರದ ಮೂರು ನೂರ ಎಂಬತ್ತ ಒಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16/05/2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್. 530

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದಕ್ಕೆ 2009– 10ನೆ ಸಾಲಿನಿಂದ ಎಂ.ಎಸ್ಸಿ., ನರ್ಸಿಂಗ್ ಕೋರ್ಸಿಗೆ ಸಂಯೋಜನೆ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ: ACA/PSR-04/2009-10, ದಿನಾಂಕ 10–07–2008.

**ಪ್ರಸ್ತಾವನೆ :**

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವು ಮೇಲೆ ಓದಲಾದ ತಮ್ಮ ಪತ್ರದಲ್ಲಿ ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದು 2009–10ನೇ ಸಾಲಿನಿಂದ ಎಂಎಸ್ಸಿ., ಇನ್ ಸೈಕೋ ಸೋಷಿಯಲ್ ರಿಹಾಬಿಲಿಟೇಷನ್ ಕೋರ್ಸನ್ನು 10 ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಸಂಯೋಜನೆಗಾಗಿ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ, 1994ರ ಕಲಂ 45(2) ರಡಿ ಸಲ್ಲಿಸಿದ್ದ ಅರ್ಜಿಯನ್ನು, ಸ್ಥಳೀಯ ತಪಾಸಣಾ ಸಮಿತಿಯ ವರದಿ, ಅಕಾಡೆಮಿಕ್ ಕೌನ್ಸಿಲ್ ಮತ್ತು ಸಿಂಡಿಕೇಟ್ ನಿರ್ಣಯವನ್ನು ಸಲ್ಲಿಸುತ್ತಾ, ಸಂಯೋಜನೆ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದು 2009–10ನೇ ಸಾಲಿನಿಂದ ಎಂ.ಎಸ್ಸಿ., ಇನ್‌ಸೈಕೋ ಸೋಷಿಯಲ್ ರಿಹಾಬಿಲಿಟೇಷನ್ ಕೋರ್ಸನ್ನು 10 ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಸಂಯೋಜನೆಯನ್ನು ನೀಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 372 ಎಂಪಿಎಸ್ 2008 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2010**

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ, 1994ರ ಕಲಂ 45(5)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದು 2009–10ನೇ ಸಾಲಿನಿಂದ ಎಂ.ಎಸ್ಸಿ., ಇನ್ ಸೈಕೋ ಸೋಷಿಯಲ್ ರಿಹಾಬಿಲಿಟೇಷನ್ ಕೋರ್ಸನ್ನು 10 (ಹತ್ತು) ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸಂಯೋಜನೆ ನೀಡಲು ಸರ್ಕಾರವು ಶಿಫಾರಸ್ಸು ಮಾಡಿದೆ.

**ಷರತ್ತು ಮತ್ತು ನಿಬಂಧನೆಗಳು**

1. ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದು ಶೇ. 25 ರಷ್ಟು ಸೀಟುಗಳನ್ನು ಸರ್ಕಾರಕ್ಕೆ ಹಂಚಿಕೆಗಾಗಿ ಬಿಟ್ಟುಕೊಡತಕ್ಕದ್ದು.
2. ಮೇಲ್ಕಂಡ ನರ್ಸಿಂಗ್ ಕೋರ್ಸುಗಳ ಸಂಯೋಜನೆಗೆ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಮಂಜೂರಾತಿಯನ್ನು ಪಡೆಯತಕ್ಕದ್ದು.
3. ಸಂಸ್ಥೆಯು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವು ನಿಗದಿಪಡಿಸಿರುವ ಮೂಲಭೂತ ಸೌಲಭ್ಯವನ್ನು ಹೊಂದಿರತಕ್ಕದ್ದು.
4. ಸರ್ಕಾರವು ನಿಗದಿಪಡಿಸಿರುವುದಕ್ಕಿಂತ ಯಾವುದೇ ಕಾರಣಕ್ಕೂ ಹೆಚ್ಚುವರಿ ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದಲ್ಲ. ಇದನ್ನು ಉಲ್ಲಂಘಿಸಿದ್ದಲ್ಲಿ 1991ರ ಕರ್ನಾಟಕ ಮಾನ್ಯತೆ ರಹಿತ ಮತ್ತು ಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ, ಅಧಿನಿಯಮದಡಿ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು.
5. ರಾಜ್ಯ ಸರ್ಕಾರವು ಕಾಲಕಾಲಕ್ಕೆ ನೀಡುವ ಸೂಚನೆ ಹಾಗೂ ಆದೇಶಗಳನ್ನು ಪಾಲಿಸತಕ್ಕದ್ದು.
6. ಸಂಸ್ಥೆಯು ಸ್ವಂತ ಆಸ್ಪತ್ರೆಯನ್ನು 5 ವರ್ಷಗಳ ಕಾಲಮಿತಿಯಲ್ಲಿ ಹೊಂದತಕ್ಕದ್ದು. ತಪ್ಪಿದಲ್ಲಿ ಕಾಲೇಜಿನ ಸಂಯೋಜನೆಯನ್ನು ಹಿಂತೆಗೆದುಕೊಳ್ಳಲಾಗುವುದು.

7. ವಿದ್ಯಾರ್ಥಿಗಳ ಪ್ರವೇಶವನ್ನು ಸರ್ಕಾರವು ಕಾಲ ಕಾಲಕ್ಕೆ ಎಂ.ಎಸ್ಸಿ., ನರ್ಸಿಂಗ್, ಎಂ.ಪಿ.ಟಿ, ಎಂ.ಫಾರ್ಮಾ ಮತ್ತು ಎಂ.ಎಸ್ಸಿ., ಸೈಕೋ ಸೋಷಿಯಲ್ ರಿಹಾಬಿಲಿಟೇಷನ್ ಕೋರ್ಸುಗಳ ಪ್ರವೇಶಕ್ಕೆ ಸರ್ಕಾರಿ ಕೋಟಾದ ಮತ್ತು ಮ್ಯಾನೇಜ್‌ಮೆಂಟ್ ಕೋಟಾದ ನಿರ್ದಿಷ್ಠ ಅನುಪಾತದಲ್ಲಿ ಪ್ರತಿಬಂಧಿಸುವ ಪ್ರಕಾರವೇ ಮಾಡತಕ್ಕದ್ದು.
8. ಮೇಲ್ಕಂಡ ಸಂಸ್ಥೆಗೆ ಕರ್ನಾಟಕ ಸರ್ಕಾರದ ವತಿಯಿಂದ ಯಾವುದೇ ರೀತಿಯ ಅನುದಾನ, ಆರ್ಥಿಕ ಸೌಲಭ್ಯಗಳನ್ನು ನೀಡಲಾಗುವುದಿಲ್ಲ. ಇದು ಶಾಶ್ವತ ಅನುದಾನ ರಹಿತ ಕಾಲೇಜಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.
9. ಮೇಲ್ಕಂಡ ಯಾವುದೇ ಷರತ್ತನ್ನು ಕಾಲೇಜು ಉಲ್ಲಂಘಿಸಿದಲ್ಲಿ 1994ರ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮದ 48ನೇ ಪ್ರಕರಣದಲ್ಲಿ ಸಂಯೋಜನೆಯನ್ನು ಹಿಂತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 551

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆಕುಕ 10 ಎಂಪಿಎಸ್ 2010, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2010**

ಕರ್ನಾಟಕ ಅನಾಟಮಿ ಕಾಯ್ದೆ, 1957 ರ ಕಲಂ 2(1) (ಎ) ಪ್ರಕಾರ ವೈದೇಹಿ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದನ್ನು ಈ ಕಾಯ್ದೆಯ ಉದ್ದೇಶಕ್ಕಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಒಂದು ಅನುಮೋದಿತ ಸಂಸ್ಥೆಯನ್ನಾಗಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 552

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ 10.4.2010 ರಂದು ನಡೆಸಬೇಕಾಗಿರುವ ಹಾಸನ ಜಿಲ್ಲಾ ಕೇಂದ್ರ ಬ್ಯಾಂಕ್ ನಿ., ಹಾಸನ ಇದರ ಆಡಳಿತ ಸಮಿತಿ ಚುನಾವಣೆಯನ್ನು ಹಿಂದೂಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಿಒ 16 ಸಿಎಲ್‌ಎಮ್ 2010 ದಿನಾಂಕ 22.01.2010
**2.** ಅಧ್ಯಕ್ಷರು, ಹಾಸನ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಹಾಸನ ಇವರ ಪತ್ರ ಸಂಖ್ಯೆ 7375/10 ದಿನಾಂಕ 06.02.2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಆದೇಶ ಸಂಖ್ಯೆ:ಸಿಒ 16 ಸಿಎಲ್‌ಎಮ್ 2010 ದಿನಾಂಕ 22.01.2010 ರನ್ವಯ ಫೆಡರಲ್ ಸಹಕಾರ ಸಂಘಗಳು ತಮ್ಮ ಆಡಳಿತ ಸಮಿತಿಗಳಿಗೆ ಚುನಾವಣೆಯನ್ನು ದಿನಾಂಕ 10.04.2010 ರಂದು ನಡೆಸಬೇಕಾಗಿದೆ. ಆದರೆ ಹಾಸನ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಹಾಸನ ಇದರ ಚುನಾವಣೆಯನ್ನು ನಡೆಸಲು ಸದರಿ ದಿನಾಂಕವು ಸೂಕ್ತವಾಗಿಲ್ಲದಿರುವುದರಿಂದ ದಿನಾಂಕ 09.04.2010 ರಂದು ಚುನಾವಣೆ ನಡೆಸಲು ಅನುಮತಿ ನೀಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಬ್ಯಾಂಕಿನ ಅಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 30 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2010**

ಮೇಲಿನ ಪರಿಸ್ಥಿತಿಯಲ್ಲಿ ಹಾಸನ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಹಾಸನ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಒ 16 ಸಿಎಲ್ಎಂ 2010 ದಿನಾಂಕ 22.01.2010 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ 09.04.2010 ರಂದು ನಡೆಸುವಂತೆ ಆದೇಶಿಸುತ್ತದೆ. ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲವೆಂದು ಸ್ಪಷ್ಟಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.553

**(ಆರ್.ಎಸ್. ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 310 ಪಿಪಿಇ 2009, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2010**

ಸರ್ಕಾರದ ಆದೇಶ ಸಂಖ್ಯೆ: ಒಇ 310 ಪಿಪಿಇ 2009, ದಿನಾಂಕ 08–11–2009ರ ಪ್ರಸ್ತಾವನೆಯ ಮೊದಲನೇ ಸಾಲಿನಲ್ಲಿ, ಆರನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ ಮೊದಲನೇ ಸಾಲಿನ "ದಿನಾಂಕ 10–10–2009 ಮತ್ತು 11–10–2009" ಎಂಬುದರ ಬದಲಾಗಿ "ದಿನಾಂಕ 06–03–2010 ಮತ್ತು 07–03–2010" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 08–11–2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 554

**(ಕೆ.ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**INFRASTRUCTURE DEVELOPMENT SECRETARIAT**

**Sub :** Development of Belgaum airport.

**Read :**
1. G.O. No. IDD 38 DIA 2003 dated 30.10.2006
2. G.O. No. IDD 109 DIA 2006 dated 22.03.2007
3. Letter No. AAI/04/57/2009-ARII (P) dated 19.2.2009 of the Executive Director (Planning), AAI.

**Preamble:**

Belgaum Airport is an operational airport. The existing Belgaum Airport is situated in an area of 400 acres. The Airport is operational from September 2003. The Air Deccan Airlines was operating, 50 seater aircraft, daily from Belgaum. With the increase in air traffic there is absolute need to upgrade the airport in order to facillitate the operation of bigger aircrafts.

2. The additional land, required for upgradation of Belgaum Airport was estimated at 370 acres by AAI. Out of the above, 230 acres is required for the extension of the runway for wide-bodied aircraft and 140 acres of land for construction of new terminal complex equipped with all essential amenities. The activities for which land would be utilised are :

a. Extension of Runway from 1459m to 2500m for the operation of AB-320 class of Aircraft.

b. Construction of Parallel taxiway joining both the ends of the Runways.

c. Construction of a new Terminal Building and associated apron for parking of 5 nos. of aircraft at a time.

d. Construction of a Cargo Terminal with associated apron.

e. Provision of Cat – I approach lighting system and installation. of ILS.

3. The land has been acquired by Deputy Commissioner Belgaum in the following villages; Balekundri, Sambra, K.H.Honnihal and Mavinakatti, of Belgaum taluk. The land acquisition process is fully complete and lands are ready for being handed over to the AAI. Meanwhile, the AAI wanted to enter into a MoU with GoK and it has made available a draft MoU approved by MoCA, GoI.

4. In G.O. read at Sl. No. (1) above, sanction was accorded for:-

(a) Acquisition of 370 acres of land for development of Belgaum airport as per the grid map sent by Dy. Commissioner, Belgaum to the AAI and to meet the cost of acquisition from the Budget of Infrastructure Development Department.

(b) To transfer this land, free of cost to the AAI for upgradation of the Belgaum airport with the developmental works.

5. The Executive Director (Planning), AAI in his letter dated 19.2.2009 read at Sl.No. (3) above, had requested for the following concessions and sent a copy of the draft MoU duly approved by Ministry of Civil Aviation (MoCA) and Airports Authority of India (AAI) Board for approval of Government of Karnataka for signing of MoU with AAI for the development of Belgaum airport.

a. Transfer 370 acres of land and any additional land free of cost and free from all encumbrances.

b. Exemption from property tax (local tax) airport/staff colony and the installation of Navigational Aids for a period of 5 years from the date of upgradation of the airport and,

c. To provide security to the aerodrome free of cost.

d. To provide free electricity and water for a period of 5 years.

6. In G.O. read at Sl.No. (2) above, Government of Karnataka considering that the new airports would not be viable in the first few years of operation, has exempted payment of property tax for a period of five years from the date of operation and has made necessary budget provisions in the Budget of IDD for the same.

7. In this background and in view of the projected losses even in the existing airport of this order, the Government have considered the proposal of AAI and orders as under:-

**Government Order No. IDD 38 DIA 2003, Bangalore, Dated 22$^{nd}$ February 2010**

After careful examination of the above proposal sanction of the Government is accorded for:-

(a) For acquisition of 370 acres of land as per the Grid Map sent by the Dy. Commissioner, Belgaum to the AAI and to meet the cost of land acquisition out of the Budget of Infrastructure Development Department.

(b) To transfer this land free of cost to the AAI for upgradation of Belgaum Airport;

(c) To provide free electric supply, water and free security to the Airport for a period of 5 years from the date of operation of Airport;

(d) To exempt payment of Property Tax and Local Body Taxes for a period of 5 years from the date of operation of Airport.

2. Necessary action will be taken by all the concerned for signing of Memorandum of Understanding (MoU) accordingly.

By Order and in the name of the Governor of Karnataka,

**(N.Manjula Geetha)**

Dy. Secretary to Government (I/c),

Infrastructure Development Department

PR. 555

## ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಗುಣ ಭರವಸೆ (Quality Assurance) ಅಧಿಕಾರಿಗಳ ಕಾರ್ಯನಿರ್ವಹಣೆ ಮತ್ತು ಹೊಣೆಗಾರಿಕೆ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ ಲೋಇ 139 ಸೇಸಕಿ 2007, ಬೆಂಗಳೂರು ದಿನಾಂಕ 4.12.2007

**2.** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ ಸಂಕದ:ಗುನಿ:152:ದಿ:2008–09:ದಿ:30.5.2008.

**ಪ್ರಸ್ತಾವನೆ :**

1. ರಾಜ್ಯ ಸರ್ಕಾರವು ಜನಸಾಮಾನ್ಯರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಹೆಚ್ಚು ಒತ್ತು ನೀಡುತ್ತಿರುವುದರಿಂದಾಗಿ ಇತ್ತೀಚೆಗೆ ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಯೋಜನೆಯ ಗಾತ್ರದಲ್ಲಿ ಭಾರಿ ಹೆಚ್ಚಳವಾಗಿರುತ್ತದೆ. ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಕಾಮಗಾರಿಗಳ ಗುಣಮಟ್ಟವನ್ನು ಉತ್ತಮಗೊಳಿಸಲು ಅನುವಾಗುವಂತೆ ವಿವಿಧ ವೃಂದದ ಗುಣನಿಯಂತ್ರಣ ಇಂಜಿನಿಯರುಗಳ ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಗುಣನಿಯಂತ್ರಣ ಪ್ರಯೋಗಾಲಯಗಳು ಕಾರ್ಯನಿರ್ವಹಿಸುತ್ತಿವೆ.
2. ಈ ಗುಣನಿಯಂತ್ರಣ (Quality Control) ವ್ಯವಸ್ಥೆಗೆ ಬದಲಾಗಿ, ಗುಣಮಟ್ಟ ಭರವಸೆ (Quality Assurance) ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯವಿರುತ್ತದೆ ಎಂದು ಈ ಬಗ್ಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಸಹ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.
3. ಪ್ರಸ್ತುತ ಜಾರಿಯಲ್ಲಿರುವ ಉಪ–ವಿಭಾಗ : ವಿಭಾಗ : ವೃತ್ತದಲ್ಲಿ ಬರುವ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಮತ್ತು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ಕಾಮಗಾರಿಗಳನ್ನು ಪರಿಶೀಲಿಸುವ ಮತ್ತು ವರದಿ ಮಾಡುವ ಜವಾಬ್ದಾರಿಯನ್ನು ಸಹ ಹೊಂದಿರುತ್ತಾರೆ.
4. ಇಲಾಖೆಯಲ್ಲಿನ ವಿವಿಧ ಗುಣನಿಯಂತ್ರಣ ಅಧಿಕಾರಿಗಳ ಹೊಣೆಗಾರಿಕೆ ಮತ್ತು ಕಾರ್ಯ ಚಟುವಟಿಕೆಗಳನ್ನು ನಿಗದಿಪಡಿಸಿ ಈ ಅಧಿಕಾರಿಗಳಿಗೆ ಸೂಕ್ತ ಜವಾಬ್ದಾರಿಯನ್ನು ನೀಡುವ ಅವಶ್ಯಕತೆಯಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 137 ಸೇಇವಿ 2009, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2010**

ಲೋಕೋಪಯೋಗಿ ಇಲಾಖೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಗುಣನಿಯಂತ್ರಣ (Quality Control) ಅಧಿಕಾರಿಗಳು/ಕಛೇರಿ ಇತ್ಯಾದಿಗಳ ಹೆಸರನ್ನು ಗುಣಭರವಸೆ (Quality Assurance) ಎಂದು ಪುನರ್‌ನಾಮಾಂಕಿತಗೊಳಿಸಲಾಗಿದೆ. ಇಲಾಖೆಯಲ್ಲಿ ಕೈಗೊಳ್ಳಲಾಗುತ್ತಿರುವ/ಕೈಗೊಳ್ಳಲಾಗುವ ವಿವಿಧ ನಿರ್ಮಾಣ ಕಾಮಗಾರಿಗಳ ಗುಣಮಟ್ಟವನ್ನು ವ್ಯವಸ್ಥಿತವಾಗಿ ಹಾಗೂ ಜವಾಬ್ದಾರಿಯುತವಾಗಿ ನಿರ್ವಹಿಸುವ, ನಿಟ್ಟಿನಲ್ಲಿ "ಗುಣ ಭರವಸೆ" ವ್ಯವಸ್ಥೆಯ ವಿವಿಧ ಅಧಿಕಾರಿಗಳು ಈ ಕೆಳಕಂಡಂತೆ ಹೊಣೆಗಾರಿಕೆಯೊಂದಿಗೆ ಕಾರ್ಯನಿರ್ವಹಿಸಲು ಆದೇಶಿಸಿದೆ.

### I ಅಧೀಕ್ಷಕ ಇಂಜಿನಿಯರ್, ಗುಣಭರವಸೆ ವೃತ್ತ:

(1) ಅಧೀಕ್ಷಕ ಇಂಜಿನಿಯರ್, ಗುಣಭರವಸೆ ವೃತ್ತ ಇವರು ಸಂಬಂಧಪಟ್ಟ, ವಲಯದ ಮುಖ್ಯ ಇಂಜಿನಿಯರ್‌ರವರ ಅಧೀನದಲ್ಲಿ ಮತ್ತು ಮಾರ್ಗದರ್ಶನದಲ್ಲಿ ಕಾರ್ಯಭಾರ ನಿರ್ವಹಿಸುವುದು.

(2) ಇವರ ಕಾರ್ಯವ್ಯಾಪ್ತಿಯು ಆಯಾ ವಲಯದ ಭೌಗೋಳಿಕ ಪ್ರದೇಶದ ವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆಯು ಕೈಗೊಳ್ಳುವ ರಸ್ತೆ ಸೇತುವೆ, ಕಟ್ಟಡ ಇತ್ಯಾದಿ ಕಾಮಗಾರಿಗಳ ಗುಣಮಟ್ಟವು ನಿಗದಿಪಡಿಸಿದ – ಮಟ್ಟದಲ್ಲಿ ಇರುವಂತೆ ಹಾಗೂ ಗುಣಭರವಸೆಗೆ ಸಂಬಂಧಿಸಿದಂತೆ ನಿರ್ಮಾಣ ಪೂರ್ವ – ನಿರ್ಮಾಣ ಹಂತ – ನಿರ್ಮಾಣೋತ್ತರ ಹಂತಗಳಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ಕೊಡುವ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಅನುಮೋದಿತ ಅಂದಾಜು ಪಟ್ಟಿಯಲ್ಲಿನ ವಿಶಿಷ್ಟ ವಿವರಣೆಯನುಸಾರ ಸಾಮಗ್ರಿಗಳ ಗುಣಮಟ್ಟ

ನಿರ್ಮಾಣ ಹಾಗೂ ಪ್ರಮಾಣಗಳ ಬಳಕೆ ಬಗ್ಗೆ ಪರಿಶೀಲನೆ ಕೈಗೊಳ್ಳುವ ಹಾಗೂ ಪ್ರಮಾಣೀಕರಿಸುವ ಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ.

(3) ಗುಣಭರವಸೆಗೆ ಸಂಬಂಧಪಟ್ಟಂತೆ ಕಾಮಗಾರಿಗಳ ಎಲ್ಲಾ ಹಂತಗಳಲ್ಲಿ ನಡೆಸುವ ಪರಿವೀಕ್ಷಣೆಯ ಮುಖ್ಯ ಉದ್ದೇಶ, ಅನುಮೋದಿತ ವಿಶಿಷ್ಟ ವಿವರಣೆಗೆ ಅನುಗುಣವಾಗಿ ಇಲಾಖೆಯ ಪ್ರಯೋಗಾಲಯ ಮತ್ತು ಸ್ಥಾನಿಕ ಪ್ರಯೋಗಾಲಯಗಳ ಮೂಲಕ ಪರೀಕ್ಷಿತಗೊಂಡು ಉತ್ತೀರ್ಣಗೊಂಡಿರುವ ಸಾಮಗ್ರಿಗಳನ್ನು ಬಳಸಿಕೊಳ್ಳುವ ಬಗ್ಗೆ ಮೇಲ್ವಿಚಾರಣೆ, ನಿರ್ಮಾಣ ಹಂತದಲ್ಲಿ ತಾಂತ್ರಿಕವಾಗಿ ಕಂಡುಬರುವ ಲೋಪದೋಷಗಳ ಬಗ್ಗೆ ಸಲಹೆ ಸೂಚನೆ ನೀಡುವಿಕೆ ಮತ್ತು ಅದಕ್ಕೆ ಪೂರಕವಾಗಿ ನೀಡುವ ಪರಿವೀಕ್ಷಣಾ ಟಿಪ್ಪಣಿಗೆ ಅನುಗುಣವಾಗಿ ನಿರ್ಮಾಣ ಕಾರ್ಯ ಮಾಡಿರುವ ಬಗ್ಗೆ ದೃಢೀಕರಿಸುವ ಜವಾಬ್ದಾರಿ ಹೊಂದಿರುತ್ತಾರೆ.

(4) ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿ ನಿರ್ವಹಿಸಲಾಗುವ ಬಂದರು ಮತ್ತು ಒಳನಾಡು ಜಲಸಾರಿಗೆ ನಿರ್ದೇಶನಾಲಯ ಕಾಮಗಾರಿಗಳ ಗುಣಭರವಸೆಯ ಬಗ್ಗೆ ಮೇಲ್ವಿಚಾರಣೆ ಮತ್ತು ಪರಿಶೀಲಿಸಿ ದೃಢೀಕರಿಸಲು ಜವಾಬ್ದಾರರಾಗಿರುತ್ತಾರೆ.

(5) ತಮ್ಮ ವೃತ್ತದ ಕಾರ್ಯವ್ಯಾಪ್ತಿಯಲ್ಲಿ ನಿರ್ವಹಿಸಲಾಗುವ ಪ್ರತಿಯೊಂದು ಕಾಮಗಾರಿಗಳ ವಿನ್ಯಾಸ ಪರಿಶೀಲನೆ ಹಾಗೂ ಸಾಮಗ್ರಿಗಳ ಗುಣಮಟ್ಟಗಳು ವಿಶಿಷ್ಟ ವಿವರಣೆಗೆ ಅನುಗುಣವಾಗಿ ಇರುವ ಬಗ್ಗೆ ಖಾತರಿಪಡಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಪರಿವೀಕ್ಷಣಾ ವರದಿಯನ್ನು ಮುಖ್ಯ ಇಂಜಿನಿಯರ್‌ರವರಿಗೆ, ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್/ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿಗೆ ಮತ್ತು ಕಾಮಗಾರಿ ಉಸ್ತುವಾರಿ ಕೋಶಕ್ಕೆ ಕಡ್ಡಾಯವಾಗಿ ನೀಡತಕ್ಕದ್ದು.

(6) ತಮ್ಮ ಪರಿವೀಕ್ಷಣೆಯ ಸಮಯದಲ್ಲಿ ಗಮನಿಸಲಾದ ಲೋಪಗಳನ್ನು ಸಂಬಂಧಪಟ್ಟ ನಿರ್ಮಾಣ ವಿಭಾಗದ ಇಂಜಿನಿಯರ್‌ಗಳು ಸರಿಪಡಿಸಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳತಕ್ಕದ್ದು ಹಾಗೂ ಕ್ರಮ ಕೈಗೊಳ್ಳದ ಅಧಿಕಾರಿಗಳ ಬಗ್ಗೆ ಮುಖ್ಯ ಇಂಜಿನಿಯರ್‌ರವರಿಗೆ ಹಾಗೂ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

(7) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಕಾರ್ಯಪಾಲಕ ಇಂಜಿನಿಯರ್ ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳ ಸಭೆಯನ್ನು ಪ್ರತಿ ತಿಂಗಳೂ ಕಡ್ಡಾಯವಾಗಿ ನಡೆಸಿ, ಸಂಬಂಧಪಟ್ಟ, ಅಧಿಕಾರಿಗಳು ಕಾಮಗಾರಿಗಳ ಗುಣಮಟ್ಟ, ಭರವಸೆ ಬಗ್ಗೆ ಕೈಗೊಂಡಿರುವ ಕ್ರಮದ ಬಗ್ಗೆ ಪರಿಶೀಲಿಸುವುದು. ಸಭೆಯ ನಡವಳಿಯ ಪ್ರತಿಯನ್ನು ತಪ್ಪದೇ ಕಾಮಗಾರಿ ಉಸ್ತುವಾರಿ ಕೋಶಕ್ಕೆ ಸಲ್ಲಿಸುವುದು.

(8) ಮುಖ್ಯ ಇಂಜಿನಿಯರ್‌ರವರ ಮಟ್ಟದಲ್ಲಿ ನಡೆಯುವ ಮಾಸಿಕ ಪ್ರಗತಿ ಪರಿಶೀಲನೆ ಸಭೆಯಲ್ಲಿ ಭಾಗವಹಿಸಿ, ವಲಯದ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಕಾಮಗಾರಿಗಳ ಗುಣಮಟ್ಟ ಭರವಸೆ ಬಗ್ಗೆ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ತಮ್ಮ ಪರಿವೀಕ್ಷಣಾ ವರದಿಗಳಿಗೆ ಪಾಲನಾ ವರದಿಗಳ ಸಲ್ಲಿಕೆ ಬಗ್ಗೆ ಮುಖ್ಯ ಇಂಜಿನಿಯರ್‌ರವರ ಗಮನಕ್ಕೆ ತರತಕ್ಕದ್ದು.

(9) ಆರ್‌ಎಂಸಿ/ಹಾಟ್‌ಮಿಕ್ಸ್ ಪ್ಲಾಂಟ್‌ಗಳನ್ನು ಖುದ್ದು ಸಂಪರ್ಕಿಸಿ, ಜಲ್ಲಿ ಸಿಮೆಂಟ್, ಮರಳು ಬಳಸುವ ನೀರು ಮತ್ತು ಡಾಂಬರನ್ನು ಪರಿಶೀಲಿಸಿ, ಪರಿಮಾಣ ಮತ್ತು ಗುಣಮಟ್ಟದ ಬಗ್ಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.

(10) 100.00 ಲಕ್ಷ ರೂ.ಗಳಿಗೆ ಮೇಲ್ಪಟ್ಟ ಅಂದಾಜು ಮೊತ್ತದ ಕಾಮಗಾರಿಗಳನ್ನು ನಿರ್ಮಾಣದ ಪೂರ್ವ, ನಿರ್ಮಾಣ ಹಂತ ಹಾಗೂ ಪೂರ್ಣಗೊಂಡ ನಂತರ ನಿಯಮಿತವಾಗಿ ಪರಿವೀಕ್ಷಣೆ ಮಾಡಿ ಅಗತ್ಯ ಪರೀಕ್ಷೆಗಳನ್ನು ನಡೆಸಿ, ಗುಣಮಟ್ಟ ಉತ್ತಮವಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ನೀಡುವುದು.

(11) ಸದರಿ ಕಾಮಗಾರಿಗಳ ಗುಣಮಟ್ಟ, ಭರವಸೆ ಬಗ್ಗೆ ಸಂಬಂಧಿಸಿದ ಗುತ್ತಿಗೆದಾರರಿಂದ ಗುಣಮಟ್ಟ, ಭರವಸೆ ಯೋಜನೆ/ಕಾರ್ಯಕ್ರಮ ಪಡೆದು ಪರಿಶೀಲಿಸಿ ಅನುಮೋದಿಸುವುದು.

(12) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ದಿ ಯೋಜನೆಗಳ ವ್ಯಾಪ್ತಿಯಲ್ಲಿನ ಸರ್ಕಾರದಿಂದ ನಿಗದಿಪಡಿಸಲಾದ ಕಾಮಗಾರಿಗಳ ಗುಣ ನಿಯಂತ್ರಣಗಳ ಬಗ್ಗೆ ಆಯಾಯ ವೃತ್ತದ ಕಾಮಗಾರಿಗಳ ಮೇಲುಸ್ತುವಾರಿ ಮಾಡಿ ಪರಿಶೀಲಿಸಿ ದೃಢೀಕರಿಸುವುದು ಮತ್ತು ನೇರವಾಗಿ ಸರ್ಕಾರಕ್ಕೆ ವರದಿ ಮಾಡುವುದು.

**II ಕಾರ್ಯಪಾಲಕ ಇಂಜಿನಿಯರ್, ಗುಣಭರವಸೆ ವಿಭಾಗ :**

(1) ಗುಣಭರವಸೆ ವೃತ್ತದ ಅಧೀಕ್ಷಕ ಇಂಜಿನಿಯರ್, ಅವರ ಅಧೀನದಲ್ಲಿ ಮತ್ತು ಮಾರ್ಗದರ್ಶನದಲ್ಲಿ ಕಾರ್ಯಭಾರ ನಿರ್ವಹಿಸತಕ್ಕದ್ದು.

(2) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆಯು ಕೈಗೊಳ್ಳುವ ರಸ್ತೆ, ಸೇತುವೆ, ಕಟ್ಟಡ ಇತ್ಯಾದಿ ಕಾಮಗಾರಿಗಳ ಗುಣಮಟ್ಟವು ನಿಗದಿತ ಮಟ್ಟದಲ್ಲಿ ಇರುವಂತೆ ಹಾಗೂ ಗುಣಭರವಸೆಗೆ ಸಂಬಂಧಿಸಿದಂತೆ ನಿರ್ಮಾಣ ಪೂರ್ವ – ನಿರ್ಮಾಣ ಹಂತ – ನಿರ್ಮಾಣೋತ್ತರ ಹಂತಗಳಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ಕೊಡುವ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಅನುಮೋದಿತ ಅಂದಾಜು ಪಟ್ಟಿಯಲ್ಲಿನ ವಿಶಿಷ್ಟ ವಿವರಣೆಯನುಸಾರ ಸಾಮಗ್ರಿಗಳ ಗುಣಮಟ್ಟ ನಿರ್ಮಾಣ ಹಾಗೂ ಪ್ರಮಾಣದ ಬಳಕೆ ಬಗ್ಗೆ ಪರಿಶೀಲನೆ ಕೈಗೊಳ್ಳುವ ಹಾಗೂ ಪ್ರಮಾಣೀಕರಿಸುವ ಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ.

(3) ಸದರಿ ಕಾಮಗಾರಿಗಳಲ್ಲಿ ಉಪಯೋಗಿಸಲ್ಪಡುವ ಸಾಮಗ್ರಿಗಳ ಗುಣಮಟ್ಟದ ಪರೀಕ್ಷೆಗಳನ್ನು ನಡೆಸಿ, ಪ್ರಮಾಣೀಕರಿಸಿ, ಫಲಿತಾಂಶಗಳನ್ನು ಆಗಿಂದಾಗ್ಗೆ ನಿರ್ಮಾಣ ವಿಭಾಗದ ಕಾರ್ಯಪಾಲಕ ಇಂಜಿನಿಯರುಗಳಿಗೆ ಒದಗಿಸುವುದು.

(4) Bureau of Indian Standards, Indian Roads Congress, National Building Code, Indian Building Congress ನಂತಹ ಸಂಸ್ಥೆಗಳ ಸಂಹಿತೆಗಳಲ್ಲಿ ನಿಗದಿಪಡಿಸಿರುವಂತೆ ವಿವಿಧ ಕಾಮಗಾರಿಗಳನ್ನು ವಿವಿಧ ಹಂತದಲ್ಲಿ ಗುಣಮಟ್ಟದ ಪರೀಕ್ಷೆಗಳನ್ನು ನಡೆಸಿ ಪ್ರಮಾಣೀಕರಿಸತಕ್ಕದ್ದು.

(5) ತಮ್ಮ ಅಧೀನದಲ್ಲಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳು ಸೂಕ್ತ ಕಾಲಕ್ಕೆ ಸಾಮಗ್ರಿಗಳ/ಕಾಮಗಾರಿಗಳ ಗುಣನಿಯಂತ್ರಣ ಪರೀಕ್ಷೆ ನಡೆಸುತ್ತಿರುವ ಬಗ್ಗೆ ಮೇಲ್ವಿಚಾರಣೆ, ಪರಿಶೀಲನೆ ನಡೆಸಿ ಅವರಿಂದ ಪ್ರಮಾಣೀಕೃತಗೊಂಡ ವರದಿಗಳನ್ನು ಪಡೆಯತಕ್ಕದ್ದು. ಈ ರೀತಿ ಕ್ರಮ ವಹಿಸದ ಅಭಿಯಂತರರುಗಳ ವಿರುದ್ಧ ಶಿಸ್ತು ಕ್ರಮಕ್ಕೆ ಶಿಫಾರಸ್ಸು ಮಾಡತಕ್ಕದ್ದು.

(6) ತಮ್ಮ ಕಾರ್ಯವ್ಯಾಪ್ತಿಗೆ ಬರುವ ಎಲ್ಲಾ ನಿರ್ಮಾಣ ವಿಭಾಗಗಳ ಕಾಮಗಾರಿಗಳ ಮಂಜೂರಾದ ಅಂದಾಜಿನ ಪ್ರತಿಗಳನ್ನು ಪಡೆದು, ಕಾಲಕಾಲಕ್ಕೆ ಅವಶ್ಯ ಪರೀಕ್ಷೆಗಳನ್ನು ಕೈಗೊಳ್ಳಲು ಸಂಬಂಧಪಟ್ಟ ಗುಣಭರವಸೆ ಉಪವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸೂಚನೆ ನೀಡತಕ್ಕದ್ದು.

(7) ಎಲ್ಲಾ ಉಪವಿಭಾಗಗಳ ಸಹಾಯಕ ಇಂಜಿನಿಯರ್/ಕಿರಿಯ ಇಂಜಿನಿಯರ್‌ರವರು ಖುದ್ದಾಗಿ ಕಾಮಗಾರಿ ಸ್ಥಳಕ್ಕೆ ಹೋಗಿ ಸಾಮಗ್ರಿಗಳ ಮಾದರಿ ಪಡೆದು ಪರೀಕ್ಷೆ ನಡೆಸಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಅಲ್ಲದೇ ಸಹಾಯಕ ಇಂಜಿನಿಯರ್ ಮತ್ತು ಕಿರಿಯ ಇಂಜಿನಿಯರ್‌ಗಳು ಅಗತ್ಯವಾಗಿ ಕಾರ್ಯಕ್ಷೇತ್ರದಲ್ಲಿ ಕಾಮಗಾರಿಗಳಿಗೆ ಪೂರಕವಾಗುವಂತೆ ರಸ್ತೆ/ಸೇತುವೆ/ಕಟ್ಟಡಗಳ ಇತ್ಯಾದಿ ನಿರ್ಮಾಣಗಳಲ್ಲಿ ಅವಶ್ಯವಿದ್ದ ಸಾಮಗ್ರಿಗಳನ್ನು ಸ್ಥಾನಿಕವಾಗಿ ನಿರ್ಮಾಣ ಇಂಜಿನಿಯರ್ ಮತ್ತು ಗುತ್ತಿಗೆದಾರರ ಸಮಕ್ಷಮದಲ್ಲಿ ಪರೀಕ್ಷೆ ನಡೆಸಿ, ಕಾಂಕ್ರೀಟ್ ಅಚ್ಚು, ಡಾಂಬರಿನ ಅಂಶ, ಉಷ್ಣತೆಯ ಪರೀಕ್ಷೆಯನ್ನು ನಡೆಸಿರುವ ಬಗ್ಗೆಯೂ ವರದಿ ಪಡೆಯತಕ್ಕದ್ದು. ಉಪವಿಭಾಗದಿಂದ ತಂದ ಮಣ್ಣಿನ ತಳಪಾಯದ ಕ್ಷೇಮಧಾರಣಾ ಶಕ್ತಿಯ ವರದಿಗೆ ಕಾರ್ಯಪಾಲಕ ಇಂಜಿನಿಯರ್‌ರವರೇ ಅನುಮೋದನೆ ನೀಡತಕ್ಕದ್ದು ಮತ್ತು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ರವಾನಿಸುವುದು. ಅಗತ್ಯವಿದ್ದಲ್ಲಿ ಅಧೀಕ್ಷಕ ಇಂಜಿನಿಯರ್, ಗುಣಭರವಸೆ ವೃತ್ತ ಇವರಿಂದ ಅನುಮೋದನೆ ಪಡೆಯುವುದು.

(8) ಮೇಲಿಂದ ಮೇಲೆ ಉಪವಿಭಾಗಗಳಲ್ಲಿನ ಪ್ರಯೋಗಾಲಯಗಳಿಗೆ ಹಠಾತ್ ಭೇಟಿ ನೀಡಿ ಕಾಮಗಾರಿಗಳ, ಸಾಮಗ್ರಿಗಳ ಪರೀಕ್ಷೆಯನ್ನು ನಿಯಮಾವಳಿಯಂತೆ ಕೈಗೊಳ್ಳುತ್ತಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳುವುದು. ತಾವು ನಡೆಸಿದ ಪರಿವೀಕ್ಷಣಾ ಟಿಪ್ಪಣಿಯನ್ನು ಕೂಡಲೇ ಗುಣಭರವಸೆ ವೃತ್ತದ ಅಧೀಕ್ಷಕ ಇಂಜಿನಿಯರ್/ಕಾಮಗಾರಿ ವೃತ್ತದ ಅಧೀಕ್ಷಕ ಇಂಜಿನಿಯರ್/ಕಾರ್ಯಪಾಲಕ ಇಂಜಿನಿಯರ್/ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಕಾಮಗಾರಿ ಉಸ್ತುವಾರಿ ಕೋಶ, ವಿಕಾಸಸೌಧ ಇವರಿಗೆ ಸಲ್ಲಿಸುವುದು. ನಿಯಮಾವಳಿಯಂತೆ ಸೂಕ್ತವಾಗಿ ಪರೀಕ್ಷೆಗಳನ್ನು ನಿರ್ವಹಿಸದ ಅಧಿಕಾರಿಗಳ ಮೇಲೆ ಶಿಸ್ತು ಕ್ರಮಕ್ಕಾಗಿ ಶಿಫಾರಸ್ಸು ಮಾಡುವುದು.

(9) ಕಾಮಗಾರಿಗಳಲ್ಲಿ ಲೋಪದೋಷಗಳು ಕಂಡು ಬಂದಿದ್ದಲ್ಲಿ ಅವುಗಳನ್ನು ಸರಿಪಡಿಸಲು ಸಂಬಂಧಪಟ್ಟ ಗುಣಭರವಸೆ/ನಿರ್ಮಾಣ ಉಪವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಕ್ರಮ ಕೈಗೊಂಡಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳುವುದು. ಲೋಪದೋಷಗಳಿಗೆ ಕಾರಣಗಳನ್ನು ನಿಖರವಾಗಿ ಗುರ್ತಿಸಿ ಅಭಿಯಂತರರ : ಗುತ್ತಿಗೆದಾರರ ಮೇಲೆ ಕ್ರಮ ಜರುಗಿಸಲು ಶಿಫಾರಸ್ಸು ಮಾಡುವುದು.

(10) ತಮ್ಮ ಕಾರ್ಯವ್ಯಾಪ್ತಿಯಲ್ಲಿನ 50,00 ಲಕ್ಷ ರೂ. ದಿಂದ 100.00 ಲಕ್ಷ ರೂ. ವರೆಗಿನ ಅಂದಾಜು ಮೊತ್ತದ ಕಾಮಗಾರಿಗಳನ್ನು ನಿರ್ಮಾಣದ ಪೂರ್ವ, ನಿರ್ಮಾಣ ಹಂತ ಹಾಗೂ ಪೂರ್ಣಗೊಂಡ ನಂತರ ನಿಯಮಿತವಾಗಿ ಪರಿವೀಕ್ಷಣೆ, ಅಗತ್ಯ ಪರೀಕ್ಷೆಗಳನ್ನು ನಡೆಸಿ, ಉತ್ತಮ ಗುಣಮಟ್ಟದಲ್ಲಿ ನಿರ್ವಹಿಸಲಾಗಿರುವ ಕುರಿತು ದೃಢೀಕರಣ ಪತ್ರವನ್ನು ನೀಡುವುದು.

(11) ಸದರಿ ಕಾಮಗಾರಿಗಳ ಗುಣಮಟ್ಟ ಭರವಸೆ ಬಗ್ಗೆ ಸಂಬಂಧಿಸಿದ ಗುತ್ತಿಗೆದಾರರಿಂದ ಗುಣಮಟ್ಟ ಭರವಸೆ ಯೋಜನೆ/ಕಾರ್ಯಕ್ರಮ ಪಡೆದು ಪರಿಶೀಲಿಸಿ ಅನುಮೋದಿಸುವುದು.

(12) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿನ ಸರ್ಕಾರದಿಂದ ನಿಗದಿಪಡಿಸಲಾದ ಕಾಮಗಾರಿಗಳ ಗುಣನಿಯಂತ್ರಣಗಳ ಬಗ್ಗೆ ಆಯಾಯ ವಿಭಾಗದ ಕಾಮಗಾರಿಗಳ ಮೇಲುಸ್ತುವಾರಿ ಮಾಡಿ ಪರಿಶೀಲಿಸಿ ದೃಢೀಕರಿಸುವುದು ಮತ್ತು ಮೇಲಾಧಿಕಾರಿಗಳಿಗೆ ವರದಿ ಮಾಡುವುದು.

**III ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಗುಣಭರವಸೆ ಉಪವಿಭಾಗ :**

(1) ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್, ಗುಣಭರವಸೆ ವಿಭಾಗ, ಇವರ ಮಾರ್ಗದರ್ಶನ ಮತ್ತು ಅಧೀನದಲ್ಲಿ ಕಾರ್ಯನಿರ್ವಹಿಸತಕ್ಕದ್ದು.

(2) ತಮ್ಮ ಕಾರ್ಯವ್ಯಾಪ್ತಿಯ ಎಲ್ಲಾ ಕಾಮಗಾರಿಗಳ ಗುಣಮಟ್ಟಕ್ಕೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

(3) ತಮ್ಮ ಕಾರ್ಯವ್ಯಾಪ್ತಿಯಲ್ಲಿನ ಎಲ್ಲಾ ಕಾಮಗಾರಿಗಳ ಮಂಜೂರಾದ ಅಂದಾಜುಗಳ ಪ್ರತಿಗಳನ್ನು ಕಾಮಗಾರಿ ಉಪವಿಭಾಗಗಳಿಂದ ಪಡೆದು, ಅವಶ್ಯವಿರುವ ಎಲ್ಲಾ ಪರೀಕ್ಷೆಗಳನ್ನು Bureau of Indian Standards, Indian Roads Congress, National Building Code, Indian Building Congress ನಂತಹ ಸಂಸ್ಥೆಗಳ ಸಂಹಿತೆಗಳಂತೆ ನಿಗದಿತ ಸಂಖ್ಯೆ ಹಾಗೂ ನಿಗದಿತ ಅವಧಿಯಲ್ಲಿ ಕೈಗೊಳ್ಳತಕ್ಕದ್ದು.

(4) ಕಾಮಗಾರಿಗೆ ಉಪಯೋಗಿಸುವ ಎಲ್ಲಾ ಸಾಮಗ್ರಿಗಳ ಮಾದರಿಯನ್ನು ಕಾಮಗಾರಿಗೆ ಉಪಯೋಗಿಸುವ ಮುನ್ನ ತಮ್ಮ ಉಪವಿಭಾಗದ ಸಹಾಯಕ ಇಂಜಿನಿಯರ್/ಕಿರಿಯ ಇಂಜಿನಿಯರ್ ಮೂಲಕ ಸಂಗ್ರಹಿಸಿ ಪರೀಕ್ಷೆ ನಡೆಸಿ ಸೂಕ್ತವಾಗಿರುವ ಬಗ್ಗೆ ದೃಢೀಕರಣ ಪತ್ರ ನೀಡತಕ್ಕದ್ದು.

(5) ಯಾವುದೇ ಕಾರಣಕ್ಕೂ ಗುತ್ತಿಗೆದಾರರಿಗೆ ಮಾದರಿ ಒದಗಿಸುವಂತೆ ಸೂಚಿಸುವುದಾಗಲೀ ಅಥವಾ ಅವರು ಒದಗಿಸಿದ ಮಾದರಿಯನ್ನು ಪರೀಕ್ಷಿಸಿ ವರದಿ ನೀಡುವುದಾಗಲೀ ಸಲ್ಲದು ಮತ್ತು ಕಾಮಗಾರಿಯ ಕಾರ್ಯಕ್ಷೇತ್ರದಲ್ಲಿಯೇ ಉಪಲಬ್ದವಿರುವ ಮೂಲಭೂತ ಸೌಕರ್ಯಗಳನ್ನು ಬಳಸಿಕೊಂಡು, ರಸ್ತೆ ಸೇತುವೆಗೆ ಸಂಬಂಧಿಸಿದಂತೆ ವಿವಿಧ ಗ್ರೇಡ್‌ಗಳ ಜಲ್ಲಿ ಡಾಂಬರು, ಕಬ್ಬಿಣ, ಸಿಮೆಂಟ್, Bearings, Expansion Joints ಇತ್ಯಾದಿ ಹಾಗೂ ಕಾಂಕ್ರೀಟ್ ಮತ್ತು ಗಾರೆಗೆ ಸಂಬಂಧಿಸಿದಂತೆ ಸಿಮೆಂಟ್, ಜಲ್ಲಿ, ನೀರು ಮರಳು ಇತ್ಯಾದಿ ಸ್ಥಾನಿಕವಾಗಿಯೇ ನಿರ್ಮಾಣ ಇಂಜಿನಿಯರ್ ಮತ್ತು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಸಮಕ್ಷಮದಲ್ಲಿ ಪರೀಕ್ಷಿಸಿ ಸಾಮಗ್ರಿಗಳು ಸೂಕ್ತವಾಗಿರುವ ಬಗ್ಗೆ ದೃಢೀಕರಿಸತಕ್ಕದ್ದು.

(6) ತಾವು ಪರಿವೀಕ್ಷಣೆ ನಡೆಸಿದ ಕಾಮಗಾರಿಗಳ ಪರಿವೀಕ್ಷಣಾ ಟಿಪ್ಪಣಿಗಳ ಪ್ರತಿಯನ್ನು ಅಧೀಕ್ಷಕ ಇಂಜಿನಿಯರ್, ಗುಣಭರವಸೆ ವೃತ್ತ/ಕಾರ್ಯಪಾಲಕ ಇಂಜಿನಿಯರ್, ಗುಣಭರವಸೆ ವಿಭಾಗ ಹಾಗೂ ಕಾಮಗಾರಿ ವೃತ್ತದ ಅಧೀಕ್ಷಕ ಇಂಜಿನಿಯರ್/ಸಂಬಂಧಪಟ್ಟ ವಿಭಾಗದ ಕಾರ್ಯಪಾಲಕ ಇಂಜಿನಿಯರ್ ಹಾಗೂ ಉಪವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ಮತ್ತು ಕಾಮಗಾರಿ ಉಸ್ತುವಾರಿ ಕೋಶ, ವಿಕಾಸಸೌಧ ಇವರಿಗೆ ಸಲ್ಲಿಸುವುದು. ತಾವು ಗಮನಿಸಿರುವ ಲೋಪದೋಷಗಳನ್ನು ಸರಿಪಡಿಸಿರುವ ಕುರಿತು ಖಾತ್ರಿಪಡಿಸಿಕೊಳ್ಳುವುದು.

(7) ತಾವು ಪರೀಕ್ಷೆ ನಡೆಸಿರುವ ಎಲ್ಲಾ ಕಾಮಗಾರಿವಾರು ಸಾಮಗ್ರಿಗಳ ಪರೀಕ್ಷಾ ವರದಿಯನ್ನು ಒಂದು ಪ್ರತ್ಯೇಕ ವಹಿಯಲ್ಲಿ ದಾಖಲಿಸಿ ಮೇಲಿನ ಅಧಿಕಾರಿಗಳ ಪರಿಶೀಲನಾ ಸಮಯದಲ್ಲಿ ಅವರ ಅವಗಾಹನೆಗೆ ಮಂಡಿಸುವುದು.

(8) ಕಾಮಗಾರಿಯ ನಿರ್ಮಾಣ ಇಂಜಿನಿಯರ್‌ಗಳ ಕೋರಿಕೆ ಪತ್ರದ ಮೇರೆಗೆ ಪರೀಕ್ಷಿಸಲಾದ ಕಾಮಗಾರಿ/ಸಾಮಗ್ರಿಗಳ ಗುಣಮಟ್ಟದ ವರದಿಯನ್ನು ಗುಣಭರವಸೆ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರೊಂದಿಗೆ ಕಡ್ಡಾಯವಾಗಿ ಚರ್ಚಿಸಿ, ಅದರ ಸಾಧಕ ಬಾಧಕಗಳನ್ನು ಗಮನದಲ್ಲಿಟ್ಟುಕೊಂಡು ಪರೀಕ್ಷಾ ಫಲಿತಾಂಶಗಳನ್ನು ಸಂಬಂಧಪಟ್ಟ ನಿರ್ಮಾಣ ಉಪವಿಭಾಗ ಮತ್ತು ವಿಭಾಗಕ್ಕೆ ಸಲ್ಲಿಸತಕ್ಕದ್ದು.

(9) ತಮ್ಮ ಕಾರ್ಯವ್ಯಾಪ್ತಿಯಲ್ಲಿ 25.00 ಲಕ್ಷ ರೂ.ದಿಂದ 50.00 ಲಕ್ಷ ರೂ.ಗಳವರೆಗಿನ ಅಂದಾಜು ಮೊತ್ತದ ಕಾಮಗಾರಿಗಳನ್ನು ನಿರ್ಮಾಣದ ಪೂರ್ವ, ನಿರ್ಮಾಣ ಹಂತ ಹಾಗೂ ಪೂರ್ಣಗೊಂಡ ನಂತರ ನಿಯಮಿತವಾಗಿ ಪರಿವೀಕ್ಷಣೆ, ಅಗತ್ಯ ಪರೀಕ್ಷೆಗಳನ್ನು ನಡೆಸಿ, ಉತ್ತಮ ಗುಣಮಟ್ಟದಲ್ಲಿ ನಿರ್ವಹಿಸಲಾಗಿರುವ

ಕುರಿತು ದೃಢೀಕರಣ ಪತ್ರವನ್ನು ನೀಡುವುದು. ಸದರಿ ಕಾಮಗಾರಿಗಳ ಗುಣಮಟ್ಟ ಭರವಸೆ ಬಗ್ಗೆ ಸಂಬಂಧಿಸಿದ ಗುತ್ತಿಗೆದಾರರಿಂದ ಗುಣಮಟ್ಟ ಭರವಸೆ ಯೋಜನೆ/ಕಾರ್ಯಕ್ರಮ ಪಡೆದು ಅನುಮೋದಿಸುವುದು.

(10) ರಸ್ತೆ ಮತ್ತು ಸೇತುವೆ ಕಾಮಗಾರಿಗಳಲ್ಲಿ ಕೇಂದ್ರ ನೌಕಾಯಾನ ಭೂಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯದ ಪ್ರಕಾರ ಅಗತ್ಯವಿರುವ ಎಲ್ಲಾ ಪರೀಕ್ಷೆಗಳನ್ನು ನಡೆಸುವುದು.

(11) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿನ ಸರ್ಕಾರದಿಂದ ನಿಗದಿಪಡಿಸಲಾದ ಕಾಮಗಾರಿಗಳ ಗುಣನಿಯಂತ್ರಣಗಳ ಬಗ್ಗೆ ಆಯಾ ಉಪ-ವಿಭಾಗದ ಮೇಲುಸ್ತುವಾರಿ ಮಾಡಿ ಪರಿಶೀಲಿಸಿ ದೃಢೀಕರಿಸುವುದು ಮತ್ತು ಮೇಲಾಧಿಕಾರಿಗಳಿಗೆ ವರದಿ ಮಾಡುವುದು.

2. ಗುಣ ಭರವಸೆ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳು ಈ ಮೇಲೆ ಸೂಚಿಸಲಾಗಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಈ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ವಿಫಲರಾಗುವ ಅಧಿಕಾರಿಗಳು ಸಿಸಿಎ ನಿಯಮಗಳಡಿ ಶಿಸ್ತು ಕ್ರಮಕ್ಕೆ ಗುರಿಯಾಗುತ್ತಾರೆ.

ಪಿ.ಆರ್.556

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಜಿ. ಸಿದ್ದಗಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು-ಸಿ)

## ಆರ್ಥಿಕ ಸಚಿವಾಲಯ

**ವಿಷಯ :** ವಾಣಿಜ್ಯ ತೆರಿಗೆ ಅಧಿಕಾರಿಗಳಾದ ಶ್ರೀ ಕೆ.ಎಂ.ಶೇಷೇಗೌಡ, ಶ್ರೀ ಕೆ. ರಾಮದಾಸರಾವ್ ಮತ್ತು ಶ್ರೀ ಎ.ಎನ್. ಕೃಷ್ಣಮೂರ್ತಿ, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ:ವಿಸಿಆರ್/ಜಿಎಜಡ್/ಸಿಆರ್-07/09-10, ದಿನಾಂಕ: 15-10-2009.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು, ಶ್ರೀ ಕೆ.ಎಂ. ಶೇಷೇಗೌಡ, ಶ್ರೀ ಕೆ. ರಾಮದಾಸರಾವ್ ಮತ್ತು ಶ್ರೀ ಎ.ಎನ್. ಕೃಷ್ಣಮೂರ್ತಿ, ಅವರುಗಳು ಮಂಗಳೂರಿನ ಜಾರಿ ವಿಭಾಗದ ಶಿರೂರು ತನಿಖಾ ಠಾಣೆಯಲ್ಲಿ ಅನುಕ್ರಮವಾಗಿ ದಿನಾಂಕ : 24-11-2003 ರಿಂದ 04-08-2007, 11-06-2005 ರಿಂದ 19-08-2008 ಮತ್ತು 22-11-2003 ರಿಂದ 19-08-2008ರ ಅವಧಿಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಕರ್ತವ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿ ತನಿಖಾ ಠಾಣೆಯ ವಿಶೇಷ ದಾಖಲೆಗಳ ವಹಿ, ಇತರೇ ದಾಖಲೆಗಳ ವಹಿ, ರವಾನೆ ಸ್ವೀಕೃತಿ ವಹಿಗಳು ಮತ್ತು ಒಳ/ಹೊರ ಮುಖ ವಹಿಗಳು, ಗೆದ್ದಲು ಮತ್ತು ತೇವಾಂಶದಿಂದಾಗಿ ನಾಶವಾಗುವವರೆಗೆ ಹಾಗೂ ಈ ರೀತಿಯಾಗಿ ನಾಶವಾಗುತ್ತಿರುವ ಮಾಹಿತಿಯನ್ನು ವಿಭಾಗದ ಜಂಟಿ ಆಯುಕ್ತರ ಗಮನಕ್ಕೆ ತರದೇ ನಿರ್ಲಕ್ಷ್ಯತನ ತೋರಿ, ಸದರಿ ದಾಖಲಾತಿಗಳನ್ನು ಜಂಟಿ ಆಯುಕ್ತರ ಪೂರ್ವಾನುಮತಿ ಪಡೆಯದೇ ನಾಶಮಾಡಿ, ದಿನಾಂಕ: 23-06-2006 ರಂದು ಮಹಜರ್ ಮಾಡುವ ಮೂಲಕ ಆಯುಕ್ತರ ಸುತ್ತೋಲೆ ಸಂಖ್ಯೆ: 14/1996-97ನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುತ್ತಾರೆಂದು ಆರೋಪ ಮಾಡಿರುತ್ತಾರೆ. ಸದರಿ ಅಧಿಕಾರಿಗಳು ಎಸಗಿರುವ ದುರ್ನಡತೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮಗಳಡಿಯಲ್ಲಿ ಶಿಸ್ತುಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಪ್ರಕರಣದಲ್ಲಿನ ಸದರಿ ಅಧಿಕಾರಿಗಳು ಗ್ರೂಪ್-ಬಿ ಅಧಿಕಾರಿಗಳಾಗಿದ್ದು, ಇವರನ್ನು ಸೇವೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವು ಸರ್ಕಾರವಾಗಿರುತ್ತದೆ. ಈ ಪ್ರಕರಣದಲ್ಲಿ ಒಂದೇ ವ್ಯವಹರಣೆಯ ದೃಷ್ಟಿಯಿಂದ ಈ ಜಂಟಿ ಇಲಾಖಾ ವಿಚಾರಣೆಗೆ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು ಎಂದು ತೀರ್ಮಾನಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 49 ವಾತೆತ 2009, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13(1) ರಲ್ಲಿ ಪದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಈ ಮುಂದೆ ತಿಳಿಸಿರುವ ಆಪಾದಿತ ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಸ್ಪಷ್ಟವಾದ ದೋಷಾರೋಪಣೆ ಪಟ್ಟಿಯನ್ನು ತಯಾರಿಸಿ ಒಂದೇ ವ್ಯವಹರಣೆಯಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ.

1) ಶ್ರೀ ಕೆ.ಎಂ. ಶೇಷೇಗೌಡ, ವಾಣಿಜ್ಯ ತೆರಿಗೆ ಅಧಿಕಾರಿ
2) ಶ್ರೀ ಕೆ. ರಾಮದಾಸರಾವ್, ವಾಣಿಜ್ಯ ತೆರಿಗೆ ಅಧಿಕಾರಿ ಮತ್ತು
3) ಶ್ರೀ ಎ.ಎನ್. ಕೃಷ್ಣಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ

ಅಲ್ಲದೆ, ಒಂದೇ ವ್ಯವಹರಣೆಯ ಉದ್ದೇಶಕ್ಕಾಗಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತದೆ. ಕ್ರಮ ಸಂಖ್ಯೆ : 1 ರಿಂದ 3 ರಲ್ಲಿರುವ ಆಪಾದಿತರುಗಳಿಗೆ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರ ಉಪ ನಿಯಮ (ii) ರಿಂದ (viii) ದ ರಲ್ಲಿ ನಿಗದಿಪಡಿಸಿರುವ ಯಾವುದೇ ಅಥವಾ ಎಲ್ಲಾ ದಂಡನೆಯನ್ನು ವಿಧಿಸಲು ಸರ್ಕಾರವು ಅಧಿಕಾರ ಹೊಂದಿರುತ್ತದೆ.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11, 11–ಎ ನಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಈ ವಿಚಾರಣೆಯಲ್ಲಿ ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.557

**(ಎಲ್.ಎಸ್. ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## COMMERCE AND INDUSTRIES SECRETARIAT

**Sub :** Approval for land acquisition through KIADB in favour of M/s. Anjani Portland Cement Ltd., to establish a "Portland Cement Plant."

**Read :** 1. Govt. Order No. CI 80 SPI 2008, dated 30-04-2008.
2. Govt. Order No. CI 80 SPI 2008, dated 21-10-2008.
3. Proceedings of the 20th State High Level Clearance Committee (SHLCC) meeting held on 05-01-2010.

**Preamble:**

The proposal of M/s. Anjani Portland Cement Ltd., to establish a "Portland Cement – 0.96 MTPA" at Matakaladevanahalli Village, Talikote Hobli, Muddebihal Taluk, Bijapur District, was approved in 13th SHLCC meeting and Government Order vide (1) was issued.

In the 20th State High Level Clearance Committee (SHLCC) meeting held on 05.01.2010. KIADB was directed to acquire and allot the required balance land as SUC to M/s. Anjani Portland Cement Ltd., as per their request.

Hence the following order :

**Government Order No. CI 72 SPI 2010, Bangalore, Dated 25th February 2010**

Government approved the acquisition and allotment of required balance land by KIADB as SUC in favour of M/s. Anjani Portland Cement Ltd., in Muddebihal Taluk, Bijapur District.

By Order and in the name of the Governor of Karnataka,

**Aparna Pavate,**
Desk Officer (Technical Cell),
Commerce & Industries Department

PR. 601